ಮಾನವಧರ್ಮ ಪ್ರತಿಷ್ಠಾನ

ಪ್ರಾರಂಭೋತ್ಸವ ೧೫-೪-೧೯೮೫

ಸಂಸ್ಮರಣ ಸಂಪುಟ



# ಪ್ರಜ್ಞಾಪ್ರಕಾಶ



ಸಂಪಾದಕರು :

ಪ್ರೊ. ಜ್ಯೋತಿ ಹೊಸೂರ

ಶ್ರೀ ಮಲ್ಲೇಪುರಂ ಜಿ. ವೆಂಕಟೇಶ

ಪ್ರೊ. ಭಾಸ್ಕರ ಪತ್ತಾರ

ಮಾನವಧರ್ಮ ಪ್ರತಿಷ್ಠಾನ, ರಾಯಬಾಗ
ಪ್ರಾರಂಭೋತ್ಸವ ೧೫-೪-೧೯೮೫
ಸಂಸ್ಮರಣ ಸಂಪುಟ



# ಪ್ರಜ್ಞಾ ಪ್ರಕಾಶ

ಸಂಪಾದಕರು :
ಪ್ರೊ. ಜ್ಯೋತಿ ಹೊಸೂರ
ಶ್ರೀ ಮಲ್ಲೇಪುರಂ ಜಿ. ವೆಂಕಟೇಶ
ಪ್ರೊ. ಭಾಸ್ಕರ ಪತ್ತಾರ

Prajna Prakash : A Collection of Research articles edited by Prof. Jyoti Hosur, Shri M.G. Venkatesh and Prof. Bhaskar Pattar : published by ManavDharma Pratisthan, Raibag 591317. (Dist Belgaum)



Pages : Part I : 56 + Part II : 60 = 116

Price : Rs. 15/—



First Edition 1985





Printers

Shri Shivananda Printing Press Gokak, Dist Belgaum

Copies available at :
Samaj Pustakalaya, Dharwad - Hubli
Sahitya Bhandar, Bangalore - Hubli



ವಿಶ್ವನಿಯಮರೂಪ

ಧರ್ಮದಲ್ಲಿ ನಿಷ್ಠೆಯುಳ್ಳ

ಪ್ರಜ್ಞಾವಂತ ಮಾನವರಿಗೆ

ಅರ್ಪಣೆ

*Life Can only be understood backward ;*
*but it must be lived Forward*

Kirkeguard



## ಪರಿವಿಡಿ



### ಭಾಗ–೧



### ಭಾಗ–೨

# ಪ್ರಸ್ತಾವನೆ

ಮಾನವಧರ್ಮ ಇದನ್ನು ಯಾವ ವ್ಯಕ್ತಿ (ವಿ+ಅಕ್ತಿ : ಕತ್ತಲೆ) ಸಂಸ್ಥಾಪಿಸಿಲ್ಲ ಅದು ಮಾನವನ ವಿಕಾಸ ಪ್ರಕ್ರಿಯೆಯೊಂದಿಗೆ ಮನಃತತ್ತ್ವದ ಅನುಸಂಧಾನದಲ್ಲಿ ವಿಕಸಿತವಾಗಿದೆ. ವಿಶ್ವಸ್ಥ ವಿಕಾಸ ಪ್ರಕ್ರಿಯೆಯಲ್ಲಿ ಮನಃತತ್ತ್ವದ ಅಂಗವಾದ ಪ್ರಜ್ಞಾಶಕ್ತಿಯ ಪ್ರಾದುರ್ಭಾವದಿಂದ ಭಾಷೆ ಮತ್ತು ಸಂಸ್ಕೃತಿಗಳ ಅನುಷಂಗದಲ್ಲಿ ಮಾನವನಿಗೆ ಅದು ಅರಿಕೆಗೆ ಬಂದಿದೆ. ಪ್ರಜ್ಞೆಯ ಪ್ರಾದುರ್ಭಾವವಾಗದ ಪ್ರಾಣಿಲೋಕದಲ್ಲಿ ಪ್ರಾಣವೇ ಧರ್ಮವಾಗಿ ಉಳಿಯಿತು. ಪ್ರಜ್ಞೆಯ ಪ್ರಾದುರ್ಭಾವದಿಂದ, ಮನಸ್ಸಿನಿಂದ ವಿಕಸಿತವಾದ ಮನು–ಜನು, ಮೂಲತಃ ಪ್ರಾಣಿಯಾದ ತಾನು ತನ್ನ ಪ್ರಾಣಧರ್ಮವನ್ನು ಮೀರಿ ಪ್ರಜ್ಞಾವಂತನಾದ, ಮಾನವನಾದ. ಪ್ರಾಣಿಲೋಕದಲ್ಲಿ ಕಾಣದ ಭಾಷೆ, ಇತಿಹಾಸ, ಸಂಸ್ಕೃತಿಗಳಿಗೆ ಕಾರಣನಾದ ; ಇತಿಹಾಸದ ವಸ್ತುವೂ ಆದ, ಇತಿಹಾಸದ ಕರ್ತೃವೂ ಆದ. ಇವೆಲ್ಲವುಗಳಿಗೆ ಪ್ರೇರಕ ಶಕ್ತಿಯಾಗಿರುವ ಅಂತಃಪ್ರಚೋದನೆ, ಒಳಬೆಳಕು, ಸ್ವಯಂವೇದ್ಯ ಅಂತಃಪ್ರಕಾಶದ ಮೂಲಕ ವಿಶ್ವಸ್ಥ ಋತ : ಧರ್ಮವನ್ನು ಗುರುತಿಸಿದ, ಅರಿತು ಆಚರಿಸಿದ. ಅದುವೇ ಮಾನವಧರ್ಮ. ಇದು ವಿಶ್ವಸ್ಥನಿಯಮ. ಯಾವುದರ ಸಹಾಯದಿಂದ ಪ್ರಾಣಿಲೋಕದ ಪ್ರಾಣಧರ್ಮವನ್ನು ಮೀರಿ ನಾವು ಮಾನವಧರ್ಮೀಯರಾದೆವೋ ಆ 'ಪ್ರಜ್ಞೆ', ಮಾನವಧರ್ಮಕ್ಕೆ ಬದ್ಧವಿದೆ. ಆದ್ದರಿಂದ ಪ್ರಜ್ಞೆ ನಷ್ಟವಾದೊಡನೆ ಮಾನವನೂ ನಷ್ಟವಾಗುವ ಅಪಾಯವಿದೆ. ಇಂದು ಮಾನವನ ಉಳಿವು ಈ ಪ್ರಜ್ಞಾಶಕ್ತಿಯ ಉಳಿವನ್ನು ಅವಲಂಬಿಸಿದೆ. ಮಾನವನಲ್ಲಿ ಇರುವ ಈ ಸ್ವಯಂವೇದ್ಯ ಅಭಿಜಾತ ಪ್ರಜ್ಞಾಶಕ್ತಿ ಪ್ರಾಣಧರ್ಮದ ಪ್ರಣವ ತತ್ತ್ವದ ಪ್ರಲೋಭನೆಗಳಿಗೆ ಸಿಕ್ಕು ನಷ್ಟವಾಗಬಾರದೆಂಬ ಘನ ಉದ್ದೇಶದಿಂದ 'ಮಾನವಧರ್ಮ ಪ್ರತಿಷ್ಠಾನ' ರಚನೆಗೊಂಡಿದೆ. ಈ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಿದೆ.

ಮಾನವನಲ್ಲಿರುವ ಅಂತಃಪ್ರಕಾಶರೂಪೀ ಈ ಪ್ರಜ್ಞಾಶಕ್ತಿಯನ್ನು ನಮ್ಮ ಪುರಾತನರು 'ಜಾತವೇದ ಅಗ್ನಿ' ಎಂದು ಕರೆದು ಅದರ ಪ್ರತೀಕವಾದ ವರುಣ, ಸೂರ್ಯ, ಸವಿತೃ, ವೈವಸ್ವತಾದಿ ದೇವತಾ ತತ್ತ್ವಗಳನ್ನು ಆರಾಧಿಸಿದರು. ಈ ದೇವತಾ ತತ್ತ್ವದ ಪ್ರೇರಣೆಯಿಂದ ಭಾರತೀಯರು ಅಮೋಘವಾದ ಪ್ರ-ಗತಿ ಸಾಧಿಸಿದ್ದುಂಟು. ಆದರೆ ಈ ತತ್ತ್ವಕ್ಕೆ ವಿರುದ್ಧವಾಗಿ ಬೆಳೆದುಬಂದ ಪ್ರಾಣತತ್ತ್ವದ ಪ್ರಣವಧರ್ಮಗಳು, ವಿರಕ್ತಿ ಪಂಥಗಳು ನಮ್ಮನ್ನು ಅಂಧಃಶ್ರದ್ಧೆಯ ಕಂದಾಚಾರದ ಕೂಪದಲ್ಲಿ ತಳ್ಳಿದವು. ಭಾರತೀಯರ ಅವನತಿಗೆ ಕಾರಣವಾದವು. ಮಾನವಧರ್ಮದ ಅಸ್ತಿತ್ವವನ್ನೇ ನಷ್ಟಪಡಿಸುವ ಹೊಂಚು ಹಾಕಿ ವರುಣ, ಸೂರ್ಯ, ಇಂದ್ರ, ಸವಿತೃ, ವೈವಸ್ವತಾದಿ ದೇವತಾ ತತ್ತ್ವವನ್ನು ಬುದ್ಧಿಪೂರ್ವಕ ಪ್ರತಿಮಾಭಂಜನ ಮಾಡಿ ಮತ್ತು ಅಪಮೌಲ್ಯಗೊಳಿಸಲಾಯಿತು. 'ಪ್ರಜ್ಞೆಯೇ ದೇವರು' ಎನ್ನುವ ಬದಲಾಗಿ 'ಪ್ರಾಣವೇ ದೇವರು' ಎನ್ನುವ

ತತ್ತ್ವಪ್ರಣಾಲಿ ಪ್ರಾಮುಖ್ಯತೆ ಪಡೆಯಿತು. ಈ ಪ್ರಾಣಕ್ಕೆ ಆಶ್ರಯವಾದ, ಆಧಾರವಾದ 'ರೇತ'ವು 'ಅತಿಭೋಗ' ಇಲ್ಲವೇ 'ಅತಿತ್ಯಾಗ' ರೂಪದಲ್ಲಿ ಪ್ರತಿಷ್ಠಿತ ಸ್ಥಾನಕ್ಕೇರಿಸಲ್ಪಟ್ಟಿತು. ಪ್ರಾಥಮಿಕ ಹಂತದ "ಶಿಶ್ನೋ ದೇವಾಃ" ತತ್ತ್ವಪ್ರಣಾಲಿ ಪುನಃ ವಿವಿಧ ಆಯಾಮಗಳೊಂದಿಗೆ ಭಿನ್ನ ರೂಪು-ರೇಷೆಗಳಿಂದ, ನಾನಾ ನಾಮಾಂತರದಲ್ಲಿ ಗೋಚರಿಸಿತು. ಹೀಗೆ ಪ್ರಜ್ಞೆಗೆ ಎರವಾದ ಮಾನವನು ಶಿಶ್ನ : ಲಿಂಗವೇ ದೇವರೆಂದು ಭಾವಿಸಿದ್ದುದು, ಇಂದಿನ ಹಲವಾರು ಮತ-ಪಂಥಗಳ ಅಡಿಪಾಯದಲ್ಲಿದೆ. ಕೆಲವರಲ್ಲಿ ಈ ಲೈಂಗಿಕ ಶಿಲ್ಪ ಪರೋಕ್ಷವಿದೆ. ಉಳಿದವರಲ್ಲಿ ಅದು ಅಪರೋಕ್ಷವಿದೆ. ಸಾಂಕೇತಿಕ ಶಾಸ್ತ್ರದ ಭೂಮಿಕೆಯಿಂದ ಬಿಚ್ಚಿನೋಡಿದರೆ ಇಂದಿನ ಮತ-ಪಂಥಗಳೆಲ್ಲ ಒಂದೇ ನಾವೆಯಲ್ಲಿ ಇವೆ. ಹೀಗಿದ್ದರೂ ಅವುಗಳಲ್ಲಿರುವ ಸ್ಪರ್ಧಾತ್ಮಕ ಮನೋಭಾವ ಸಖೇದಾಶ್ಚರ್ಯಗಳನ್ನು ಉಂಟು ಮಾಡುತ್ತದೆ.

ಹೀಗೆ ಪ್ರಜ್ಞೆಯನ್ನು ಸದಾ ಜಾಗೃತವಾಗಿರುವ ಋಷಿ ತತ್ತ್ವ ನಷ್ಟವಾಗಿ ಅದರ ಸ್ಥಳದಲ್ಲಿ ತಲೆಯೆತ್ತಿದ ಮೋಕ್ಷಕಾಮೀ ಮುನಿ ಪಂಥಗಳು ಪ್ರಜ್ಞೆಯನ್ನು ಅವಹೇಳನಮಾಡಿ ಪ್ರಜ್ಞಾಶಕ್ತಿಯನ್ನು ಸ್ಥಿತಗೊಳಿಸಲು 'ಸ್ಥಿತಪ್ರಜ್ಞ' 'ತುರೀಯಾ' 'ಬ್ರಹ್ಮಾನಂದ' 'ಆತ್ಮಾನಂದ' 'ಲಿಂಗಾಂಗ ಸಾಮರಸ್ಯ' 'ಕೇವಲ-ಕೈವಲ್ಯ' 'ಪಿಂಡ ಬ್ರಹ್ಮಾಂಡೈಕ್ಯ' ಮುಂತಾದ ಹೊಸ ಧಾರಣೆಗಳನ್ನು ಪ್ರಚುರಗೊಳಿಸಿ ಮಾನವನನ್ನು ಪ್ರತಿಗಾಮೀ ದಾರಿಯಲ್ಲಿ ತಳ್ಳಿದವು. "ಪ್ರಜ್ಞಾನಂ ಬ್ರಹ್ಮ" ವೆಂದು ಪ್ರಕಾಶರೂಪ ಪ್ರಜ್ಞಾನವನ್ನು ಬ್ರಹ್ಮ : ಲಿಂಗತತ್ತ್ವಕ್ಕೆ ಸಮೀಕರಿಸುವ ಆತ್ಮಘಾತುಕ ಹಂತಕ್ಕೂ ಹೋಗಲು ಹೇಸಲಿಲ್ಲ. ಪ್ರಜ್ಞೆ ಪ್ರಕಾಶ ಯುಕ್ತವಿದೆ. ಅದು ಬ್ರಹ್ಮ : ಲಿಂಗ : ತಮೋ ರೂಪೀ ಅಲ್ಲ. ಆದ್ದರಿಂದ 'ಪ್ರಜ್ಞಾನಂ ಬ್ರಹ್ಮ'ದ ಬದಲಾಗಿ 'ಪ್ರಜ್ಞಾನಂ ಪ್ರಕಾಶ' ನಮ್ಮೆಲ್ಲರ ಉಗ್ಘಡಣೆಯಾಗಬೇಕಾಗಿದೆ. ಇದೇ ಕಾರಣದಿಂದ ಈ ಸಂಸ್ಮರಣ ಸಂಪುಟವನ್ನು 'ಪ್ರಜ್ಞಾಪ್ರಕಾಶ' ಎಂದು ಹೆಸರಿಸಲಾಗಿದೆ.

ಪ್ರಸ್ತುತ ಸಂಸ್ಮರಣಸಂಪುಟದಲ್ಲಿ ಎರಡು ಭಾಗಗಳಿವೆ. ಪ್ರಥಮ ಭಾಗದಲ್ಲಿರುವ ಲೇಖನಗಳು ನೇರವಾಗಿ ಮಾನವಧರ್ಮಕ್ಕೆ ಸಂಬಂಧಿಸಿದ್ದು, ಮಾನವಧರ್ಮ ಎಂದರೇನು? ಅದು ಅಸ್ತಿತ್ವದಲ್ಲಿತ್ತೆ? ಅದರ ದೇವತಾ ತತ್ತ್ವದ ಸ್ವರೂಪ ಯಾವುದು? ಮಾನವಧರ್ಮದ ಮೂಲ ಸತ್ತ್ವವಾದ ಪ್ರಜ್ಞೆಯ ಹರಹು ಎಷ್ಟು? ಈ ಪ್ರಜ್ಞೆಯನ್ನು ನಷ್ಟಮಾಡುವ ನಾರಾಯಣ ಸ್ವರೂಪೀ ಬುದ್ಧಿಯ ಆಕೃತಿ ಯಾವುದು? ಈ ಪ್ರಜ್ಞೆಯನ್ನು 'ಪ್ರಜ್ಞಾವಾದಾಂಶ್ಚ ಭಾಷಸೇ !' 'ಸ್ಥಿತಪ್ರಜ್ಞ' ಮುಂತಾದ ಮಾತುಗಳಿಂದ ನಷ್ಟಗೊಳಿಸಿ "ಬುದ್ಧಿಯೋಗಂ ದಧಾಮಿ" ಎಂದು ಪ್ರಜ್ಞೆಯ ಬದಲು ಅವಾಂತರಕಾರಿ ಬುದ್ಧಿಯನ್ನೇ ದಯಪಾಲಿಸುವ ಶ್ರೀಮದ್ ಭಗವದ್ಗೀತೆಯ ಸಾರವೇನು ? ಇತ್ಯಾದಿ ಮೂಲಭೂತ ಪ್ರಶ್ನೆಗಳಿಗೆ ಉತ್ತರ ರೂಪವಾದ, ಪ್ರಥಮ ಭಾಗದಲ್ಲಿ, ಪ್ರೊ. ಜ್ಯೋತಿ ಹೊಸೂರ, ಡಾ॥ ಶಂ. ಬಾ. ಜೋಶಿ, ಶ್ರೀ ಮಲ್ಲೇ-ಪುರಂ ಜಿ. ವೆಂಕಟೇಶ ಮತ್ತು ಪ್ರೊ. ಭಾಸ್ಕರ ಪತ್ತಾರ ಅವರ ಲೇಖನಗಳನ್ನು ಪ್ರಾಜ್ಞ ಓದುಗರು ಗಮನಿಸಬೇಕು. ಅದರಂತೆಯೇ ಮೂಲಭೂತ ಪ್ರಶ್ನೆಗಳಿಗೆ ಪೋಷಕವಾಗಿ

ಉತ್ತರಿಸುವ ಲೇಖನಗಳು ದ್ವಿತೀಯ ಭಾಗದಲ್ಲಿವೆ. ಕೆಲವೊಂದು ವಿಷಯಗಳಲ್ಲಿ ದ್ವಿತೀಯ ಭಾಗದ ಲೇಖನಗಳು ಕೆಲವು ಭಿನ್ನತೆಗಳನ್ನು ಒಳಗೊಂಡರೂ,ಒಟ್ಟಿಂದದಲ್ಲಿ ಅವು ಮಾನವಧರ್ಮದ ತಿಳುವಳಿಕೆಗೆ ಸಹಾಯಕಾರಿಯಾಗಿವೆ ಎಂಬ ದೃಷ್ಟಿಯಿಂದ ಅವುಗಳನ್ನಿಲ್ಲಿ ಸಂಕಲಿಸಲಾಗಿದೆ. ದ್ವಿತೀಯ ಭಾಗದಲ್ಲಿ ಡಾ॥ ಪೋಲಂಕಿ ರಾಮಮೂರ್ತಿ, ವಿದ್ಯಾಲಂಕಾರ ಪ್ರೊ. ಎಸ್. ಕೆ. ರಾಮಚಂದ್ರರಾವ, ಶ್ರೀ ಗೌರೀಶ ಕಾಯ್ಕಿಣಿ. ಡಾ॥ ವೇಣುಗೋಪಾಲ ಸೊರಬ ಮತ್ತು ಶ್ರೀ ಎಂ. ಜಿ. ವೆಂಕಟೇಶ ಅವರುಗಳ ಲೇಖನಗಳಿವೆ.

ಬಿ. ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರ ಅವರು ನಿಯೋಜಿಸಿದ ಡಾ॥ಶಂ.ಬಾ. ಜೋಶಿ ದತ್ತಿ ಉಪನ್ಯಾಸದಲ್ಲಿ ಪ್ರೊ. ಎಸ್. ಕೆ. ರಾಮಚಂದ್ರರಾವ ಅವರು ನೀಡಿದ ದತ್ತಿ ಉಪನ್ಯಾಸವು ಈಗ 'ವೈವಸ್ವತಮನು' ಹೆಸರಿನಲ್ಲಿ ಪ್ರಕಟವಾಗಿದೆ. ಪ್ರೊ ಎಸ್.ಕೆ. ರಾಮಚಂದ್ರರಾಯರ ಉಪನ್ಯಾಸದ ಧಾಟಿ ಮತ್ತು ಅದರಿಂದ ನಿರ್ಮಿತವಾದ ಸಂದೇಹಗಳಿಗೆ ಡಾ॥ ಶಂ. ಬಾ. ಜೋಶಿ ತಮ್ಮ ಪ್ರತಿಕ್ರಿಯೆಯನ್ನು 'ಪ್ರಾದುರ್ಭಾವ ಸಮಯದ ಮನುಜನು' ಲೇಖನದಲ್ಲಿ ವ್ಯಕ್ತಮಾಡಿ ಸತ್ಯಾನ್ವೇಷಣೆಗೆ ಒತ್ತು ಕೊಟ್ಟಿದ್ದಾರೆ.

ಪ್ರಸ್ತುತ'ಪ್ರಜ್ಞಾಪ್ರಕಾಶ' ಸಂಸ್ಮರಣ ಸಂಪುಟವನ್ನು ಹೊರತರುವಲ್ಲಿ ಲೇಖನಗಳನ್ನು ಒದಗಿಸಿದ ಎಲ್ಲ ವಿದ್ವಾಂಸರಿಗೂ, ತಮ್ಮ ಸಂಘ ಸಂಸ್ಥೆಗಳ ಜಾಹೀರಾತುಗಳನ್ನು ಕೊಟ್ಟು, ಆರ್ಥಿಕವಾಗಿ ಸಹಕರಿಸಿದ ಎಲ್ಲ ಮಹನೀಯರಿಗೂ, ಸಂಘ ಸಂಸ್ಥೆಗಳಿಗೂ, ಸಕಾಲದಲ್ಲಿ ಮುದ್ರಿಸಿಕೊಟ್ಟ ಗೋಕಾಕದ ಶಿವಾನಂದ ಮುದ್ರಣಾಲಯದವರಿಗೂ ಹಾಗೂ ಸಿಬ್ಬಂದಿ ವರ್ಗಕ್ಕೂ ಪ್ರತಿಷ್ಠಾನದ ಪರವಾಗಿ ಕೃತಜ್ಞತೆಗಳು. ಪ್ರಸ್ತುತ ಕಾರ್ಯದಲ್ಲಿ ಪರೋಕ್ಷವಾಗಿ-ಅಪರೋಕ್ಷವಾಗಿ, ಸಹಾಯ-ಸಹಕಾರಗಳನ್ನಿತ್ತ ಸರ್ವರಿಗೂ ಕೃತಜ್ಞತೆಗಳನ್ನು ಅರ್ಪಿಸದಿರಲಾರೆ.

ರಾಯಬಾಗ —ಪ್ರೊ. ಭಾಸ್ಕರ ಪತ್ತಾರ

೧೨-೪-೮೫

# ಮಾನವಧರ್ಮ ಪ್ರತಿಷ್ಠಾನ
## (ಸ್ಥೂಲ ಪರಿಚಯ)

ಡಾ. ಶಂ. ಬಾ. ಜೋಶಿ ಅವರು ಪ್ರಖ್ಯಾತ ಸಾಂಸ್ಕೃತಿಕ ಸತ್ಯಾನ್ವೇಷಕರು. ಪ್ರಜ್ಞಾವಂತ ಚಿಂತಕರು. ಕಳೆದ ಐದಾರು ದಶಕಗಳಲ್ಲಿ ಅವರು ಪ್ರಕಟಿಸಿದ ಸತ್ವಪೂರ್ಣ ಕೃತಿಗಳಿಂದ ಭಾರತದ ಮತ್ತು ಕರ್ನಾಟಕದ ಅಗ್ರಮಾನ್ಯಸಾಂಸ್ಕೃತಿಕ ಸಂಶೋಧಕರೆಂದು ಪರಿಗಣಿಸಲ್ಪಟ್ಟಿದ್ದಾರೆ. ಅಲ್ಲದೆ ಅಂತರ್‌ರಾಷ್ಟ್ರೀಯ ಮಹತ್ತ್ವದ ಹೊಸ ವಿಚಾರಗಳನ್ನು ಸಂಶೋಧಿಸಿ ಪ್ರತಿಪಾದಿಸಿರುವುದರ ಮೂಲಕ ಅವರು ಜಾಗತಿಕ ಚಿಂತಕರ ಗಮನ ಸೆಳೆದಿದ್ದಾರೆ.

ಡಾ. ಶಂ.ಬಾ. ಜೋಶಿ ಅವರ ಸಾಂಸ್ಕೃತಿಕ ಸತ್ಯಾನ್ವೇಷಣೆಯು ಕಾರ್ಯವು ಅವರ ಇತ್ತೀಚಿಯ ಕೃತಿಗಳಾದ ೧) ಪ್ರವಾಹಪತಿತರ ಕರ್ಮಹಿಂದೂ ಎಂಬ ಧರ್ಮ ೨) ವೈವಸ್ವತಮನು ಪ್ರಣೀತ ಮಾನವಧರ್ಮದ ಆಕೃತಿ ೩) ಬುಧನ ಜಾತಕ ಇವುಗಳ ಪ್ರಕಟನೆಯೊಂದಿಗೆ ಒಂದು ಖಚಿತ ನೆಲೆಯನ್ನು ತಲುಪಿದೆ. ಮಡಿಕೇರಿಯಲ್ಲಿ ಜರುಗಿದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಪೀಠದಿಂದ ಅವರು ಮಾಡಿದ ಭಾಷಣದಲ್ಲಿ ಅವರ ಸಾಂಸ್ಕೃತಿಕ ಸತ್ಯಾನ್ವೇಷಣೆಯು ಸಾರವೆಲ್ಲ ಹರಳುಗೊಂಡಿದೆ. ಆ ಭಾಷಣದಲ್ಲಿ ಅವರು ಭಾರತದ ಮತ್ತು ಜಾಗತಿಕ ಹಂತದಲ್ಲಿ ಜರುಗಿದ ಸಾಂಸ್ಕೃತಿಕ ಸ್ಥಿತ್ಯಂತರದ ಸ್ಪಷ್ಟ ಚಿತ್ರ ಕೊಟ್ಟಿದ್ದಾರೆ, ಮತ್ತು ಮಾನವನು ಅ–ಮಾನವನಾಗಿರುವುದರ ವಿವರಗಳನ್ನು ಒದಗಿಸಿ, **ಅ–ಮಾನವನಾಗಿರುವ** ಮಾನವ ಮತ್ತೆ **ಮಾನವ**ನಾಗಬೇಕಾಗಿರುವುದರ ಅವಶ್ಯಕತೆಯ ಮೇಲೆ ಒತ್ತುಕೊಟ್ಟು ಹೇಳಿದ್ದಾರೆ. ಎಲ್ಲರೂ ಈ ದಿಶೆಯಲ್ಲಿ, ಆಲೋಚಿಸಿ ಕೂಡಲೇ ಕಾರ್ಯಪ್ರವೃತ್ತರಾಗಬೇಕೆಂದು ಕಳಕಳಿಯಿಂದ ಕೇಳಿಕೊಂಡಿದ್ದಾರೆ.

ಇಂದು ಮಾನವರು ಮತ-ಮತಗಳಲ್ಲಿ ಹಂಚಿಹೋಗಿ ಮೂಲ ಮಾನವಧರ್ಮವನ್ನೇ ಮರೆತಿದ್ದಾರೆಂಬುದು ಡಾ. ಶಂ. ಬಾ. ಅವರ ನಿಲುವು. ಆದ್ದರಿಂದ ಮತಗಳನ್ನು ಬಿಟ್ಟುಕೊಟ್ಟು ಪ್ರಜ್ಞೆಗೆ ಬದ್ಧವಾದ ಮನಸ್ಸಿನ ಅಂತಃಪ್ರಚೋದನೆಯ ಮಾನವಧರ್ಮವನ್ನು ಅರಿತು ಅನುಸರಿಸುವುದರ ಅಗತ್ಯವನ್ನು ಅವರು ತಮ್ಮೆಲ್ಲ ಕೃತಿಗಳಲ್ಲಿ ತೋರಿಸಿದ್ದಾರೆ. ಈ ಕಾರ್ಯ ವ್ಯವಸ್ಥಿತವಾಗಿ ಸಾಗಬೇಕೆಂದೂ ಅವರ ಹಂಬಲವಾಗಿದೆ.

ಭಾರತೀಯ ಪರಂಪರೆಯಲ್ಲಿಯ ಪ್ರಕಾಶತತ್ತ್ವದ ಸಾಂಕೇತಿಕ ವೈವಸ್ವತ ಮನು ಮಾನವಧರ್ಮದ ಪ್ರೇರಕ ಶಕ್ತಿ. ಆದರೆ ಇಂದು ಈ ಮನುವನ್ನೇ ಸ್ಥಾನಭ್ರಷ್ಟನನ್ನಾಗಿಸಿ, ಭಾರತೀಯರು ಚಾಂದ್ರನ ಉಪಾಸಕರಾಗಿದ್ದಾರೆ ; ಮೋಕ್ಷಕಾಮಿ

ಮಾಗಳ ವ್ಯಾಮೋಹಕ್ಕೆ ಸಿಲುಕಿ, ಪ್ರಕಾಶದಿಂದ ವಂಚಿತರಾಗಿದ್ದಾರೆ. ಈ ಕಾರ್ಯವು ಇಂದಿನ ವೇದ, ಭಗವದ್ಗೀತೆ ಮುಂತಾದ ಗ್ರಂಥಗಳಿಂದ ಆಗಿದೆ. ಹೀಗಿದ್ದರೂ ಈ ಗ್ರಂಥಗಳೇ ಅತ್ಯಂತ ಪವಿತ್ರವೆಂದು ಭಾರತೀಯರು ಭ್ರಮಿಸಿದ್ದಾರೆ. ಈ ಭ್ರಮಾ ನಿರಸನವಾಗಿ ನಮ್ಮ ಪರಂಪರೆಯಲ್ಲಿ ಆಗಿರುವ ಸ್ಥಿತ್ಯಂತರದ ತಿಳುವಳಿಕೆ ಬಾರದ ಹೊರತು ಭಾರತೀಯರಿಗೆ ಪ್ರಜ್ಞಾಪ್ರಕಾಶ ಕಾಣದೆಂಬುದೂ, ಉದ್ಧಾರ ಆಗದೆಂಬುದೂ ಡಾ. ಶಂ. ಬಾ ಅವರ ಸಾಂಸ್ಕೃತಿಕ ಸತ್ಯಾನ್ವೇಷಣೆಯ ಫಲಿತವಾಗಿದೆ.

ಈ ದಿಶೆಯಲ್ಲಿ ಸಾಂಸ್ಕೃತಿಕ ಸತ್ಯಾನ್ವೇಷಣೆಯ ಕಾರ್ಯ ಸಾಗಿಸಿ ಅವರ ಫಲವನ್ನು ಮಾನವತೆಯ ಉದ್ಧಾರಕ್ಕಾಗಿ ಪ್ರಕಟಿಸುವ ಕಾರ್ಯ ಸದಾ ಮುಂದುವರಿಯುವುದು ಅಗತ್ಯವಿದೆ. ಮತ್ತು ಸಂಶೋಧನೆಗಳ ಬೆಳಕಿನಲ್ಲಿ ಕಾರ್ಯಾಚರಣೆ ಆಗುವಂತೆ ನೋಡಿಕೊಳ್ಳಲು ವ್ಯವಸ್ಥಿತ ಸಂಘಟನೆಯೂ ಬೇಕು. ಈ ಬಗೆಯ ಕಾರ್ಯದಲ್ಲಿ ಪ್ರಜ್ಞಾವಂತರು ತೊಡಗಬೇಕೆಂದು ಡಾ. ಶಂ. ಬಾ. ಅವರ ಕರೆಯಾಗಿದೆ. ಅವರ ಕರೆಗೆ ಓಗೊಟ್ಟು ದಿ. ೨೬-೧-೧೯೮೩ ರಂದು ಅವರೊಂದಿಗೆ ಚರ್ಚಿಸಲಾಯಿತು. ಆಗ ಅವರ ಈ ಸತ್ಯಾನ್ವೇಷಣೆಯ ಕಾರ್ಯ ಮುಂದುವರಿಯಲು ಮತ್ತು ಅವರ ಸತ್ಯಾನ್ವೇಷಣೆಯ ಫಲಿತಗಳನ್ನು ಕುರಿತು ಪರಿಶೀಲನೆ ಮಾಡಲು ಹಾಗೂ ಸತ್ವಪೂರ್ಣವಾದವುಗಳನ್ನು ಕಾರ್ಯಾಚರಣೆಯಲ್ಲಿ ತರಲು ಒಂದು ಸಂಘಟನೆ ಬೇಕೆಂದು ನಿರ್ಣಯಿಸಲಾಯಿತು. ಆಗ ಇಂಥ ಒಂದು ಸಂಘಟನೆ ಮಾಡುವುದಾದರೆ ತಾವು ೩೦೦೦ ರೂ. ನಗದು ಹಣ ಮತ್ತು ತಮ್ಮ ಗ್ರಂಥಗಳ ಹಾಗೂ ಲೇಖನಾದಿಗಳ ಮುದ್ರಣ ಮತ್ತು ಪುನರ್ಮುದ್ರಣದ ಸರ್ವಸ್ವಾಮ್ಯವನ್ನೂ ಈ ಸಂಘಟನೆಗೆ ಒಪ್ಪಿಸುವುದಾಗಿ ತಿಳಿಸಿದರು. ಅವರ ಈ ಕೊಡುಗೆಯಿಂದ ಪ್ರೇರಿತರಾಗಿ ೧) ಪ್ರಾ. ಜ್ಯೋತಿ ಹೊಸೂರ ೨) ಪ್ರಾ. ಭಾಸ್ಕರ ಪತ್ತಾರ ೩) ಡಾ. ನಿಂಗಣ್ಣ ಸಣ್ಣಕ್ಕಿ ಇವರು ತಲಾ ಒಂದು ಸಾವಿರ ರೂಪಾಯಿ ಈ ಸಂಘಟನೆಗೆ ಕೊಡುವುದಾಗಿಯೂ ಹೇಳಿ ಈ ಕಾರ್ಯ ಕೈಗೆತ್ತಿಕೊಳ್ಳುವುದಕ್ಕೆ ಸಿದ್ಧರಾದರು. ಈ ಯೋಜನೆಗೆ ತಮ್ಮ ಸಂಪೂರ್ಣ ಒಪ್ಪಿಗೆ ನೀಡಿ, ತಾವೂ ಈ ಕಾರ್ಯಕ್ಕೆ ಹೆಗಲುಗೊಡಲು ಸಿದ್ಧರಾದರು ತತ್ಫಲವಾಗಿ **'ಮಾನವಧರ್ಮ ಪ್ರತಿಷ್ಠಾನ'** ಅಸ್ತಿತ್ವಕ್ಕೆ ಬಂದಿತು. ಪ್ರತಿಷ್ಠಾನದ ಕಾರ್ಯ ವ್ಯವಸ್ಥಿತವಾಗಿ ಮತ್ತು ನಿರಂತರವಾಗಿ ಮುಂದುವರಿದುಕೊಂಡು ಹೋಗಬೇಕೆಂಬ ಉದ್ದೇಶದಿಂದ ಅದಕ್ಕೆ ಒಂದು ಸಂವಿಧಾನ (ನಿಯಮಾವಳಿ) ರೂಪಿಸಿ, ಬೆಳಗಾವಿ ವಿಭಾಗದ ಚಾರಿಟಿ ಕಮೀಶನರ ಅವರಲ್ಲಿ ದಿ. ೨೦-೩-೧೯೮೪ ರಂದು E ೬06 (BGM) ಈ ಕ್ರಮಾಂಕದಡಿಯಲ್ಲಿ ನೋಂದಣಿ ಮಾಡಿಸಲಾಯಿತು.

ಪ್ರಸ್ತುತ 'ಮಾನವಧರ್ಮ ಪ್ರತಿಷ್ಠಾನ'ದ ವಿಶ್ವಸ್ತ ಮಂಡಳಿಯ ಸದಸ್ಯರು ಕೆಳಗಿನಂತೆ ಇದ್ದಾರೆ.

೧) ಡಾ. ಶಂ. ಬಾ. ಜೋಶಿ ಸಂಸ್ಥಾಪಕರು

೨) ಪ್ರಾ. ಜ್ಯೋತಿ ಹೊಸೂರ ಅಧ್ಯಕ್ಷರು

೩) ಶ್ರೀ ಮಲ್ಲೇಪುರಂ ಜಿ. ವೆಂಕಟೇಶ ಉಪಾಧ್ಯಕ್ಷರು

೪) ಪ್ರಾ. ಭಾಸ್ಕರ ಪತ್ತಾರ ಕಾರ್ಯದರ್ಶಿಗಳು

೫) ಡಾ. ನಿಂಗಣ್ಣ ಸಣ್ಣಕ್ಕಿ ಸದಸ್ಯರು

೬) ಪ್ರಾ. ಶ್ರೀನಿವಾಸ ಕುಲಕರ್ಣಿ ಸದಸ್ಯರು

**'ಮಾನವಧರ್ಮ ಪ್ರತಿಷ್ಠಾನ'ದ ಉದ್ದೇಶಗಳು :**

ಸಾಂಸ್ಕೃತಿಕ ಅಧ್ಯಯನ, ಸೌರಮನು ಸಂಸ್ಕೃತಿಯ ಸಂಶೋಧನೆ, ಪರಿಶೋಧನೆ ಮಾಡುವುದು ಮತ್ತು ಮನುಕುಲದ ಉದ್ಧಾರಕ್ಕಾಗಿ ಅದರ ಪ್ರಚಾರ ಮಾಡುವುದು. ಈ ಮೂಲಕ ಪುನಃ ವೈವಸ್ವತಮನು ಸಂಸ್ಕೃತಿಯನ್ನು, ಮಾನವಧರ್ಮವನ್ನು ಪ್ರತಿಷ್ಠಾಪನೆ ಮಾಡುವುದು.

ಮೇಲಿನ ಉದ್ದೇಶ ಸಾಧನೆಗೆ ಪೋಷಕವಾಗುವ, ಪೂರಕವಾಗುವ ವಿವಿಧ ಬಗೆಯ ಕಾರ್ಯಚಟುವಟಿಕೆಗಳನ್ನು ಸಂಘಟಿಸುವುದು.

**ಪ್ರತಿಷ್ಠಾನದ ಕಾರ್ಯ ಚಟುವಟಿಕೆಗಳ ರೂಪುರೇಷೆ :**

ಅ) ಪ್ರತಿಷ್ಠಾನದ ಉದ್ದೇಶ ಸಾಧನೆಗಾಗಿ ವ್ಯಾಖ್ಯಾನ ಮಾಲೆಯನ್ನು ವರ್ಷಕ್ಕೊಮ್ಮೆಯಾದರೂ ಏರ್ಪಡಿಸತಕ್ಕದ್ದು.

ಆ) ಪ್ರತಿಷ್ಠಾನದ ಆರ್ಥಿಕ ಬಲ ಮತ್ತು ಉಳಿದ ಅನುಕೂಲತೆಗಳಿಗೆ ತಕ್ಕಂತೆ ಕೆಳಗಿನ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬಹುದು.

೧) ಪ್ರಚಾರೋಪನ್ಯಾಸ ಮತ್ತು ವಿಚಾರ ಸಂಕಿರಣಗಳು.

೨) ಗ್ರಂಥ ಪ್ರಕಟಣೆ.

೩) ವೈವಸ್ವತಮನು ಪ್ರಣೀತ ಮಾನವಧರ್ಮ–ಸಂಸ್ಕೃತಿಗಳಿಗೆ ಸಂಬಂಧಿಸಿದ ಜನಪ್ರಿಯ ಮತ್ತು ಸೃಜನಶೀಲ ಕೃತಿ ರಚನೆಗೆ ಪ್ರೋತ್ಸಾಹ.

೪) ಪತ್ರಿಕೆ ನಡೆಸುವುದು.

೫) ಲೇಖನ ಮತ್ತು ಕೃತಿಗಳಿಗೆ ಪುರಸ್ಕಾರ.

೬) ಸೌರಸಂಸ್ಕೃತಿಯನ್ನು, ಮಾನವಧರ್ಮವನ್ನು ಆಚರಣೆಯಲ್ಲಿ ತರುವ ವೈಶ್ವಾನರರಿಗೆ ಪುರಸ್ಕಾರ.

೭) ಸಮಾನ ಮನೋಧರ್ಮದ ಸಂಘ ಸಂಸ್ಥೆಗಳೊಂದಿಗೆ ಸಹಕಾರ.

೮) ಉದ್ದೇಶ ಸಾಧನೆಗೆ ಪೂರಕ–ಪೋಷಕ ಅಂಗ ಸಂಸ್ಥೆಗಳನ್ನು ಸ್ಥಾಪಿಸಿ ನಡೆಯಿಸುವುದು.

೯) ಇತರ

ಇದು ಮಾನವಧರ್ಮ ಪ್ರತಿಷ್ಠಾನದ ಸ್ವರೂಪ, ಉದ್ದೇಶ ಮತ್ತು ಕಾರ್ಯ ಚಟುವಟಿಕೆಗಳ ಸ್ಥೂಲ ಪರಿಚಯ.

ರಾಯಬಾಗ ಜ್ಯೋತಿ ಹೊಸೂರ

೧೨–೪–೧೯೮೫

*The most incomprehensible thing about the world is that it is comprehensible*

Einstei

# ಧರ್ಮ ಮತ್ತು ಮಾನವಧರ್ಮ

ಜ್ಯೋತಿ ಹೊಸೂರ

## ಧರ್ಮ ಮತ್ತು ಮತ

**'ಧರ್ಮ'** ಪದವು ತನ್ನ ವಿಶಾಲ ವ್ಯಾಪ್ತಿಯ ಮೂಲಾರ್ಥವನ್ನು ಕಳೆದು ಕೊಂಡು, ಇಂದು ಸಂಕುಚಿತಾರ್ಥದಲ್ಲಿ ಬಳಕೆಗೊಳುತ್ತಲಿದೆ. ಈ ಪದದ ಇಂದಿನ ಪ್ರಚಲಿತಾರ್ಥವೆಂದರೆ **ಮತ** (Religion). ಇಸ್ಲಾಂ, ಬೌದ್ಧ, ಕ್ರೈಸ್ತ, ಜೈನ ಶಿಖ್ಖ,ವೀರಶೈವ ಇತ್ಯಾದಿಗಳನ್ನೆಲ್ಲ ನಾವಿಂದು ಧರ್ಮ ಎಂದೇ ಕರೆಯುತ್ತೇವೆ. ಸೂಕ್ಷ್ಮ ವಾಗಿ ಪರ್ಯಾಲೋಚಿಸಿದರೆ ಇವು **ಧರ್ಮ**, ಅನ್ನಿಸಿಕೊಳ್ಳಲು ಅರ್ಹವಾದವುಗಳಲ್ಲ ವೆಂಬುದೂ ಇವುಗಳಿಗೆ ಕೇವಲ **'ಮತ'** ಗಳೆನ್ನಬಹ ದೆಂಬುದೂ ಸ್ಪಷ್ಟವಾಗುತ್ತದೆ.

**'ಧರ್ಮ'** ಎಂದರೆ **ಮತ** ಅಲ್ಲ. ಈ **'ಮತ'** ಎಂಬ ಪದವು ಸೀಮಿತಾರ್ಥ ಹೊಂದಿದೆ. ಮತ ಪದದ ಮೂಲಾರ್ಥವೆಂದರೆ–ಖಚಿತಾರ್ಥವೆಂದರೆ–ಅಭಿಪ್ರಾಯ. ಜಗತ್ತು ಮತ್ತು ಜೀವಿಗಳ ಹುಟ್ಟು– ಸಾವುಗಳ ಗುಟ್ಟು, ಹುಟ್ಟಿನ ಮೊದಲು ಮತ್ತು ಸಾವಿನ ನಂತರದ ರಹಸ್ಯ, ಆತ್ಮ–ಪರಮಾತ್ಮಗಳ ಸಂಬಂಧ, ಮಾನವ ಜೀವನದ ಗುರಿ ಇವೇ ಮುಂತಾದ ಕೆಲವು ಮೂಲಭೂತವಾದ ಹಾಗೂ ಕುತೂಹಲಕಾರಿಯಾದ ವಿಷಯುಗಳನ್ನು ಕುರಿತು ಅದೆಷ್ಟೋ ವರ್ಷಗಳಿಂದ ಜಗತ್ತಿನಲ್ಲಿಯ ಅನೇಕ ಚಿಂತ-ಕರು ತಮ್ಮ ತಮ್ಮ ಅಭಿಪ್ರಾಯ ಮಂಡಿಸಿದ್ದಾರೆ. ಬುದ್ಧ, ಮಹಾವೀರ, ಕ್ರಿಸ್ತ, ಮುಹಮ್ಮದ, ಬಸವಣ್ಣ ಮುಂತಾದವರು ಈ ಬಗೆಯ ಅಭಿಪ್ರಾಯ ಮಂಡಿಸಿದವರಲ್ಲಿ ಪ್ರಮುಖರು. ಇವರ ಮತ್ತು ಇಂಥವರ ಅಭಿಪ್ರಾಯುಗಳೇ **ಮತಗಳು.** ಇವುಗಳಿಗೆ ಇಂಗ್ಲೀಷಿನಲ್ಲಿ **Religion** ಎಂದು ಹೆಸರು.

ಮತಗಳಿಗೆಲ್ಲ ಒಬ್ಬ ವ್ಯಕ್ತಿ ಸಂಸ್ಥಾಪಕ (ಪ್ರವಾದಿ) ನಾಗಿರುವುದು ಸಾಮಾನ್ಯ. ಜಗತ್ತುಜೀವಿಇತ್ಯಾದಿಗಳ ಸೃಷ್ಟಿಯ ಬಗೆಗಿನ ಕಲ್ಪನೆಗಳನ್ನೊಳಗೊಂಡ ಸಿದ್ಧಾಂತಗಳು, ಆತ್ಮ–ಪರಮಾತ್ಮ,ಮೋಕ್ಷ ಇತ್ಯಾದಿಗಳ ಬಗೆಗಿನ ತತ್ತ್ವಗಳು ಮತ್ತು ಜೀವನದ ಕಲ್ಪಿತ ಗುರಿಯ ಸಾಧನೆಗಾಗಿ ಯೋಜಿಸಿದ ಆಚರಣೆಯ ವಿಧಿ–ವಿಧಾನಗಳು ಮುಂತಾದವುಗಳ ಬಗೆಗೆ ವಿವರಗಳನ್ನುಳ್ಳ ಆಧಾರಗ್ರಂಥ ಪ್ರತಿ ಮತಕ್ಕೂ ಇರುವುದುಂಟು. ಸಾಮಾನ್ಯ ವಾಗಿ ಒಂದು ಮತಕ್ಕೂ ಇನ್ನೊಂದು ಮತಕ್ಕೂ ಸಿದ್ಧಾಂತ, ತತ್ತ್ವ ಮತ್ತು ಆಚರಣೆ ಮುಂತಾದವುಗಳಿಗೆ ಸಂಬಂಧಿಸಿದಂತೆ ಮೂಲಭೂತ ಭಿನ್ನತೆ ಇರುತ್ತದೆ. ತತ್ಫಲವಾಗಿ ನಮ್ಮದೇ ಸರಿ, ನಮ್ಮದೇ ಮೇಲು ; ಇನ್ನೊಬ್ಬರದು ತಪ್ಪು, ಕೀಳು ಎಂಬಂಥ ಭಾವನೆಗಳು ಬೆಳೆದು–ಬಲಗೊಂಡು ಬಹಳ ಹಿಂದಿನಿಂದ ಇಂದಿನವರೆಗೂ ಮತದ ಮೇಲಿನ ಅಂಧಾಭಿಮಾನದಿಂದಾಗಿ ಜಗತ್ತಿನ ಎಲ್ಲೆಡೆ ಕಲಹ, ಕೊಲೆ, ಯುದ್ಧಗಳು ಅವ್ಯಾಹತವಾಗಿ ಜರುಗಿರುವುದನ್ನೂ – ಜರುಗುತ್ತಲಿರುವುದನ್ನೂ ಇತಿಹಾಸ ಸಾರಿ

ಹೇಳುತ್ತಲಿದೆ. ಒಂದು ವೇಳೆ ಈ ಮತಗಳಲ್ಲಿ ಮಾನವತೆಯನ್ನೆಲ್ಲ ಒಂದುಗೂಡಿಸುವ ಶಕ್ತಿ-ಸತ್ವ ಇದ್ದಿದ್ದರೆ, ಆತ್ಯಂತಿಕ ಸತ್ಯವನ್ನೊಳಗೊಂಡ ತತ್ವಾದಿಗಳಿದ್ದಿದ್ದರೆ ಈ ಬಗೆಯ ಮೇಲಾಟ, ಕಚ್ಚಾಟ, ಹೋರಾಟಗಳು ಏಕೆ ನಡೆಯುತ್ತವೆ ? ಈ ಹಿನ್ನೆಲೆಯಲ್ಲಿ ಪರ್ಯಾಲೋಚಿಸಿದರೆ ಮತಗಳೆಂದರೆ ಭಿನ್ನತೆಯನ್ನು ಬಿತ್ತಿ ಬೆಳೆಯುವ ವಂಥವುಗಳೆಂದು ಅನಿವಾರ್ಯವಾಗಿ ಹೇಳಲೇಬೇಕಾಗುತ್ತದೆ. ಈ ಮತ-ಪಂಥಗಳ ತಮ್ಮ ಸಿದ್ಧಾಂತ, ತತ್ತ್ವ, ಆಚರಣಾದಿಗಳನ್ನು ಹುಟ್ಟಿನಿಂದಲೇ ಮಾನವನ ಮೇಲೆ ಪರಂಪರೆಯಿಂದ ಹೇರುವುದರಿಂದಾಗಿ ಅವುಗಳಲ್ಲಿಯ ಲೋಪ-ದೋಷಗಳನ್ನು ಪ್ರಶ್ನಿ ಸುವ, ವಿಮರ್ಶಿಸುವ ಶಕ್ತಿಯನ್ನು, ವ್ಯಕ್ತಿ ಕಳೆದುಕೊಳ್ಳುತ್ತಾನೆಂಬಲ್ಲಿ ಸಂಶಯವಿಲ್ಲ. ಒಂದು ವೇಳೆ ತನ್ನ ಹುಟ್ಟು ಮತದಲ್ಲಿರುವ ಲೋಪ-ದೋಷಗಳನ್ನು ಎತ್ತಿ ತೋರಿಸಿ ಆ ಮತವನ್ನು ತೊರೆದು ಹೊರಬಂದವನು ಮಹಾವ್ಯಕ್ತಿಯಾಗುತ್ತಾನೆಂಬುದನ್ನೂ ನಾವು ಗಮನಿಸಬಹುದಾಗಿದೆ. ಬುದ್ಧ, ಮಹಾವೀರ, ಕ್ರಿಸ್ತ, ಮುಹಮ್ಮದ, ಬಸವಣ್ಣ ಮೊದಲಾದವರೆಲ್ಲ ತಮ್ಮ ಹುಟ್ಟು ಮತಗಳನ್ನು ತೊರೆದವರೇ ಎಂಬುದನ್ನು ನೆನೆದಾಗ ಎಲ್ಲ ಮತಗಳೂ ಅರೆ-ಕೊರೆಗಳನ್ನುಳ್ಳವುಗಳೇ ಎಂಬುದು ಸಿದ್ಧವಾಗುತ್ತದೆ. ಅಂತೆಯೇ ಮತ-ಮತಗಳಲ್ಲಿಯ ಈ ಅರೆ-ಕೊರೆಗಳನ್ನು ಇನ್ನೊಬ್ಬರು ಎತ್ತಿ ತೋರಿಸಿದಾಗ ಅಂಧಾಭಿಮಾನದಿಂದಾಗಿ ದ್ವೇಷ ಹುಟ್ಟಿ ಬೆಳೆಯುತ್ತದೆ. ಹೀಗಾಗಿ ಮತಗಳು ತಮ್ಮ ಘೋಷಿತ ಗುರಿ ಸಾಧಿಸದೇ ವಿಫಲವಾಗಿರುವುದು ಕಟು ಸತ್ಯ. ಇದು **ಮತದ** ಕತೆ Religion ಎಂಬ ಇಂಗ್ಲೀಷ ಪದದಲ್ಲಿಯೂ ಇದೇ ಬಗೆಯ ಅರ್ಥ ಅಭಿಪ್ರೇತ ಗೊಂಡಿದೆಯೆಂದು ಅದರ ನಿಷ್ಪತ್ತಿಯನ್ನು ಹೇಳುವ ಕೋಶಗಳಿಂದ ಸ್ಪಷ್ಟವಾಗುತ್ತದೆ.

**'ಧರ್ಮ'** ಭಾರತೀಯ ಪರಂಪರೆಯಲ್ಲಿಯ ಅತ್ಯಂತ ಸತ್ವಯುಕ್ತವಾದ ಮಹ ತ್ವದ ಪದ. ಇದಕ್ಕೆ ತಕ್ಕ ಸಂವಾದಿ ಪದ ಇಂಗ್ಲೀಷಿನಲ್ಲಿ ಸಿಕ್ಕುವುದಿಲ್ಲ. ಈ ಪದದ ಮಂಥನ ಉದ್ಬೋಧಕ.

**'ಧರ್ಮ'** ಪದದ ಇತಿಹಾಸ ಋಗ್ವೇದ ಕಾಲದಷ್ಟು ಹಿಂದಕ್ಕೆ ಹೋಗುತ್ತದೆ. ಋಗ್ವೇದದಲ್ಲಿ ಈ ಪದ ಮತ (Religion) ಎಂಬರ್ಥದಲ್ಲಿ ಬಳಕೆಗೊಂಡಿಲ್ಲ. ಸಂಸ್ಕೃತ ಕೋಶಗಳು 'ಧರ್ಮ' ಎಂಬುದಕ್ಕೆ ಸ್ಥಿರವಾಗಿರುವಂಥದು (That which is to be held fast or kept), ನಿಯಮ, ಗುಣ, ಶೀಲ ಇತ್ಯಾದಿಗಳು ಮೂಲಾರ್ಥಗಳೆಂಬ ಸೂಚನೆ ಕೊಡುತ್ತವೆ. ಇವೆಲ್ಲ ಅರ್ಥಗಳ ಆಶಯ : ನಿಯಮ- **ವಿಶ್ವಸ್ಥ ನಿಯಮ.**

**'ವಿಶ್ವಸ್ಥ ನಿಯಮ'** ಎಂಬ ಮೂಲಾರ್ಥ ಹೊಂದಿರುವ **ಧರ್ಮ** ಎಂಬುದು ಹೊರಗಿನ ಒತ್ತಾಯದಿಂದ-ಕಟ್ಟು ಪಾಡುಗಳಿಂದ-ರೂಪುಗೊಳ್ಳುವಂಥದಲ್ಲ. ಇದು ಸಹ-ಜ ಆದುದು, ಆಂತರಿಕವಾದುದು.

## 'ಚೋದನಾ ಲಕ್ಷಣೋ ಧರ್ಮಃ
## (ಪ್ರಚೋದನೆಯೇ ಧರ್ಮದ ಲಕ್ಷಣವಾಗಿದೆ)

ಪುರಾತನ ಪರಂಪರೆಯಲ್ಲಿಯ ಧರ್ಮದ ಈ ವ್ಯಾಖ್ಯೆ ಧರ್ಮ ಕುರಿತು ಮೇಲೆ ಹೇಳಿದ ಮಾತುಗಳನ್ನು ಸಮರ್ಥಿಸುತ್ತದೆ. ಮೇಲಿನ ವ್ಯಾಖ್ಯೆಯಲ್ಲಿ ಪ್ರಚೋದನೆ ಯೆಂಬುದರಲ್ಲಿ ಆಂತರಿಕ ಪ್ರಚೋದನೆಯೆಂಬ ಅರ್ಥವು ಹುದುಗಿದೆಯೆಂಬುದನ್ನು ಬಿಚ್ಚಿ ಹೇಳಬೇಕಾಗಿಲ್ಲ. ಅಂತೆಯೇ "ಜೀವನ ವಿಶ್ವಸ್ಥ ಅಂತಃಪ್ರಚೋದನೆಯ ಆಚರ ಣವೇ ಧರ್ಮ"[1] ಎಂಬುದಾಗಿಯೂ ಹೇಳಬಹುದಾಗಿದೆ. ಈ **'ಧರ್ಮ ಎಂಬುದು ಮಾನವನ ಕಲ್ಪಿತವಲ್ಲ'** ಧರ್ಮ ಎಂದರೆ ನಿಯಮ. ಉದಾ : 'ದೇಹಧರ್ಮ' 'ಮನೋಧರ್ಮ' 'ಸಮಾಜಧರ್ಮ' ಮುಂತಾದವುಗಳು. 'ದೇಹಧರ್ಮ'ದ ಈ ಸ್ವಭಾವವು ವ್ಯಕ್ತಿ ಕಲ್ಪಿತವಲ್ಲ. 'ಪಶುಧರ್ಮ' ಎಂಬಲ್ಲಿ ಪಶುಗಳಿಗೆ ತಮ್ಮ ಸ್ವಭಾವ- ಧರ್ಮ-ಪಾಲಿಸಲು, ಯಾವುದೇ ಹೊರಗಿನ ಒತ್ತಾಯವೂ ಇರುವುದಿಲ್ಲ. ಪ್ರಾಣಿಗಳು ಪ್ರಾಣಧರ್ಮವನ್ನು ಹೊರಗಿನ ಒತ್ತಾಯವಿಲ್ಲದೆಯೇ ಅನುಸರಿಸುತ್ತವೆ.

"ಈ ಪ್ರಾಣ (ಪ್ರಾಣಿ) ಧರ್ಮದ ಸ್ವರೂಪವನ್ನು ವರ್ಣಿಸುವ ಸುಭಾಷಿತವು ಅಭ್ಯಸನೀಯವಿದೆ : 'ಆಹಾರ, ನಿದ್ರಾ, ಭಯ ಮೈಥುನಂ ಚ ಸಮಾನಂ ಏತತ್ ಪಶುಭಿಃ ನರಾಣಾಂ' ದೇಹಕ್ಕೆ ಅನ್ನ ಆಹಾರ ಬೇಕು, ನಿದ್ದೆ ಬೇಕು. ಹೆಣ್ಣಿಗೆ ಗಂಡಿನ ಅವಶ್ಯಕತೆಯಿದೆ, ಇದೇ ಮೇರೆಗೆ ಗಂಡಿಗೆ ಹೆಣ್ಣಿನ ಜರೂರಿ ಇದೆ. ಶತ್ರುಗಳ ಭೀತಿ ಪ್ರಾಣಿಗಳಿಗೆ ಉಂಟೇ ಉಂಟಾಗಿ ಇವೆಲ್ಲವೂ ದೇಹಧರ್ಮವಾಯ್ತು.

ಈ ಸುಭಾಷಿತಕಾರನು, 'ನರ' ಮತ್ತು 'ಪಶು' **ಈ ಉಭಯ ವರ್ಗ ಗಳಲ್ಲಿಯೂ** ಸಮಾನ ಧರ್ಮವೇ ಇದೆ, ಎನ್ನುತ್ತಾನೆ.[2] **'ನರ'** **'ಪಶು'** ಇವೆರಡರಲ್ಲೂ ಆಂತರಿಕ ಪ್ರೇರಣೆ ಎಂದರೆ ಇವುಗಳ ಧರ್ಮ ಸಮಾನವಾಗಿದೆಯೆಂಬುದು ಮೇಲಿನ ಸುಭಾಷಿತದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ, ಧರ್ಮವೆಂದರೆ ಜೀವನ ವಿಶ್ವಸ್ಥ— ವಸ್ತುವರ್ಗ, ಜೀವಿವರ್ಗ ಇತ್ಯಾದಿಗಳೆಲ್ಲದರಲ್ಲಿಯ ಆಂತರಿಕ ಸಹ-ಜ ಸ್ವಭಾವಗುಣ ದಿಂದಾಗಿ ಅವುಗಳ ನಡೆ ನುಡಿರೂಪುಗೊಳ್ಳುತ್ತವೆಂಬುದನ್ನು ಅರಿತುಕೊಳ್ಳಬೇಕಾಗು ತ್ತದೆ. ಇಂಥ ನಡೆನುಡಿಗಳು ಯಾವಾಗಲೂ ಸನ್ಮಾರ್ಗಗಾಮಿಗಳಾಗಿಯೇ ಇರುತ್ತ ವೆಂಬಲ್ಲಿ ಸಂಶಯವಿಲ್ಲ. ಇಲ್ಲಿ ಒಂದು ಪ್ರಶ್ನೆ ಉದ್ಭವಿಸುವುದು ಸಹಜ. ಜೀವಿಗಳ ಕೆಟ್ಟ ನಡೆನುಡಿಗಳಿಗೆ ಏನು ಕಾರಣ-ಯಾವ ಪ್ರಚೋದನೆ ಕಾರಣ ? ಉತ್ತರ ಹೇಳುವುದು

---

೧. ಡಾ. ಶಂ. ಬಾ. ಜೋಶಿ : ಮಾನವ ಧರ್ಮದ ಆಕೃತಿ : ಕಾಲಗತಿ ಪ್ರಕಾಶನ, ರಾಯಬಾಗ ಪುಟ ೧೪

೨. ಡಾ. ಶಂ. ಬಾ. ಜೋಶಿ : ಮಾನವಧರ್ಮದ ಆಕೃತಿ (೧೯೬೯) ಕಾಲಗತಿ ಪ್ರಕಾಶನ, ರಾಯಬಾಗ ಪುಟ ೧

ಕಷ್ಟವಲ್ಲ. ಜೀವಿಗಳ ದುಷ್ಟ ನಡೆನುಡಿಗಳಿಗೆ ಬಾಹ್ಯ ಪ್ರಚೋದನೆ ಪ್ರಲೋಭನೆಗಳೇ ಕಾರಣಗಳಾಗುತ್ತವೆಯೇ ಹೊರತು, ಇವುಗಳಿಗೆ ಆಂತರಿಕ ಪ್ರಚೋದನೆ ಎಳ್ಳಷ್ಟೂ ಕಾರಣವಾಗಿರುವುದಿಲ್ಲವೆಂಬುದು ಮಾನವರ ಮಾನಸಿಕ ವ್ಯಾಪಾರ ಗಮನಿಸಿದರೆ ಸ್ಪಷ್ಟವಾಗುತ್ತದೆ. ಇಷ್ಟೇ ಅಲ್ಲ ಆಂತರಿಕ ಪ್ರಚೋದನೆ (ಒಳ ಮನಸ್ಸು) ಇಂಥ ಕಾರ್ಯಗಳಿಗೆ ವಿರೋಧವನ್ನೊಡ್ಡುತ್ತಿರುತ್ತದೆಂಬುದೂ ವಿದಿತವಾಗುತ್ತದೆ.

**'ಧರ್ಮ'** ಪದವು **'ಧೃ'** ಎಂಬ ಸಂಸ್ಕೃತ ಧಾತುವಿನಿಂದ ರೂಪುಗೊಂಡಿದೆ, ಧರಿಸುವ ಎತ್ತಿಹಿಡಿಯುವ-ಆಂತರಿಕ ಶಕ್ತಿಯೆಂದು ಧರ್ಮ ಪದಕ್ಕೆ ಅರ್ಥ. ಈ ಅರ್ಥದ ಆಶಯವೂ ವಿಶ್ವಸ್ಥ ನಿಯಮವೆಂದೇ ಎಂಬುದು ಸ್ಪಷ್ಟ.

ಈಗ **'ಧರ್ಮ'** ಎಂಬುದು ನಾವಿಂದು ಭಾವಿಸಿರುವಂತೆ ಪೂಜಾ, ಆಚರಣೆ, ವಿಧಿ-ನಿಷೇಧಗಳ ಕೃತ್ರಿಮ ಕಟ್ಟಳೆಗಳಿಂದ ಕೂಡಿದ **ಮತ**ವಲ್ಲವೆಂಬುದು ನಿಚ್ಚಳವಾಗುತ್ತದೆ.

**ಧರ್ಮ**ವು ಮಾನವನನ್ನು ಪರಿಪೂರ್ಣತೆಯೆಡೆಗೆ ತಳ್ಳುವ ಆಂತರಿಕ ಪ್ರಚೋದನೆ—ಜೀವನ ಮೌಲ್ಯಗಳ ಪ್ರಚೋದಕ ಶಕ್ತಿ. ಅಂತೆಯೇ, ಇಷ್ಟೊಂದು ಅರ್ಥ ಗೌರವದಿಂದ ತುಂಬಿರುವ ಈ ಪದವನ್ನು ಇಂಗ್ಲೀಷ ಭಾಷೆಗೆ ಅನುವಾದ ಮಾಡಲು ತಕ್ಕ ಸಂವಾದಿ ಪದ ಸಿಕ್ಕುವುದಿಲ್ಲ. Religion ಎಂಬ ಪದವಂತೂ ಈ ವಿಶಾಲಾರ್ಥವನ್ನು ಅಭಿವ್ಯಕ್ತ ಮಾಡಲಾರದೆಂಬುದನ್ನು ಈಗಾಗಲೇ ಹೇಳಲಾಗಿದೆ. ಆದರೆ, ಪಾಶ್ಚಾತ್ಯರು ವಿಶೇಷ ಅರ್ಥಶಕ್ತಿಯನ್ನು ನೀಡಿ, ವಿಶೇಷವಾಗಿ ಬಳಸುತ್ತಿರುವ Culture (ನಮ್ಮಲ್ಲಿ ಸಂಸ್ಕೃತಿ ಎಂಬುದಾಗಿ ಅನುವಾದಗೊಂಡಿದೆ) ಎಂಬ ಪದವು ನಮ್ಮ ಪರಂಪರೆಯಲ್ಲಿನ 'ಧರ್ಮ' ಪದದ ಸರಿಸಮಾನ ಆಗುವುದೆಂದು ಗ್ರಹಿಸಿಕೊಳ್ಳಬಹುದಾಗಿದೆ. ಇವೆರಡೂ ಪದಗಳ ಅರ್ಥ ಸರ್ವಾಂಶದಲ್ಲಿಯೂ ಸರಿಸಮಾನವಾಗಿದೆಯೆಂದೇನೂ ಅಲ್ಲ. ಆದರೆ ಇವೆರಡರ ಒಟ್ಟಾರೆ ಆಶಯ ಹತ್ತಿರಕ್ಕೆ ಬರುತ್ತದೆ ಎಂದು ಮಾತ್ರ ತಿಳಿದುಕೊಳ್ಳಬೇಕು. ಭಾರತೀಯ ಪರಂಪರೆಯ **'ಧರ್ಮ'** ಪದ ಮತ್ತು ಪಾಶ್ಚಾತ್ಯ ಪರಂಪರೆಯಲ್ಲಿಯ ಸಂಸ್ಕೃತಿ ಅರ್ಥದ (?) Civilization ಪದ ಇವೆರಡರಲ್ಲಿಯ ಅರ್ಥದ ಒಟ್ಟಾರೆ ಆಶಯ ಸುಮಾರಾಗಿ ಒಂದೇಯಾಗಿದೆಯೆಂಬ ಅಭಿಪ್ರಾಯವನ್ನು ವಿಶ್ವವಿಖ್ಯಾತ ಕವಿ ರವೀಂದ್ರನಾಥ ಠಾಕೂರ ಅವರು ಅಭಿವ್ಯಕ್ತಗೊಳಿಸಿರುವುದನ್ನು ಈ ಪ್ರಸಂಗದಲ್ಲಿ ಸ್ಮರಿಸಿಕೊಳ್ಳಬಹುದು.[3]

---

೩. Rabindranath Tagore Civilization & Progress (Letters & Addresses, PP, 42 58)

**ನರಧರ್ಮ**

ಮೇಲೆ ಉದಾಹರಿಸಿರುವ ಸುಭಾಷಿತದಲ್ಲಿ **ಪಶು** ಮತ್ತು **ನರ** ಇವೆರಡೂ ವರ್ಗಗಳಲ್ಲಿಯು **ದೇಹಧರ್ಮ** ಒಂದೇಯಾಗಿದೆಯೆಂದು ಹೇಳಿರುವುದು ಅತ್ಯಂತ ಚಿಂತನೀಯವಿದೆ. ಕೇವಲ ದೇಹಧರ್ಮಕ್ಕೆ ಮಾತ್ರ ಬಂಧಿತವಾಗಿ ಯಾವುದೇ ಬಗೆಯ ವಿವೇಚನೆಯಿಲ್ಲದೆ 'ಆಹಾರ, ನಿದ್ರಾ, ಭಯ, ಮೈಥುನ' ಮುಂತಾದ ಕ್ರಿಯೆ ಗಳನ್ನು ನಡೆಯಿಸುವುದು ಪಶುಗಳಿಗೆ ಸಹಜಧರ್ಮ. ಆದರೆ **ಮಾನವರು** ಅನ್ನಿಸಿಕೊಳ್ಳು ವವರಲ್ಲಿಯೂ ಈ ಬಗೆಯ ವರ್ತನೆ ಕಂಡುಬಂದರೆ ಇಂಥವರಿಗೆ ಮನುಜರೆನ್ನುವುದು ಹೇಗೆ ? ಇವರೂ ಪಶು ಸಮಾನರೇ ! ಪಶುಗಳು ನರ-ನಾಡಿಗಳ ಪ್ರಚೋದನೆಯಿಂದ ನಡೆಯಿಸುವ ಈ ಕ್ರಿಯೆಗಳನ್ನು ಮಾನವರೆನ್ನಿಸಿಕೊಳ್ಳುವವರೂ ನಡೆಯಿಸಿದರೆ, ಅಂಥವರು ಹೆಸರಿಗೆ ಮಾತ್ರ-ತೋರಿಕೆಗೆ (ದೈಹಿಕವಾಗಿ) ಮಾತ್ರ—ಮಾನವರಾಗು ತ್ತಾರೆಯೇ ಹೊರತು, ನಿಜಾರ್ಥದಲ್ಲಿ **ಮಾನವರು** ಅನ್ನಿಸಿಕೊಳ್ಳಲು ಅರ್ಹರಾಗರು. ಅಂತೆಯೇ ಸುಭಾಷಿತಕಾರನು '**ನರ**' ಎಂಬ ಪದವನ್ನು ಅತ್ಯಂತ ಅರ್ಥಯುಕ್ತವಾಗಿ ಬಳಸಿ, ಇಂಥವರು ನರರೇ ಹೊರತು ಮಾನವರೆನ್ನಿಸಿಕೊಳ್ಳಲಾರರೆಂಬುದನ್ನು ಸ್ಪಷ್ಟ ವಾಗಿ ಸೂಚಿಸಿದ್ದಾನೆಂದು ಹೇಳಬೇಕಾಗುತ್ತದೆ. ಪಶುಗಳಂತೆ ಕೇವಲ ನರ-ನಾಡಿಗಳ ಪ್ರಚೋದನೆಗೊಳಗಾಗಿ ಕಾರ್ಯವೆಸಗುವ ಇಂಥವರನ್ನು ನಿರ್ದೇಶಿಸಲು '**ನರ** ಎಂಬ ಶಬ್ದ ಪ್ರತಿಮೆ ಭಾರತೀಯ ಪರಂಪರೆಯಲ್ಲಿ ರೂಪುಗೊಂಡು, ಭಾಷೆಯಲ್ಲಿ ಉಳಿದು ಬಂದಿರುವುದು ಗಮನಾರ್ಹ ಸಂಗತಿ.

ತೋರಿಕೆಗೆ ಮಾನವರಂತಿದ್ದು, ನಡತೆಯಲ್ಲಿ ಪಶುಗಳಂತೆ ಇರುವವರನ್ನು **ನರರು** ಎಂದೇ ಸಂಬೋಧಿಸುವುದು ಯೋಗ್ಯ ರೀತಿ. ಇಂಥವರ ನರಪ್ರಚೋದಿತ ಧರ್ಮಕ್ಕೆ '**ನರಧರ್ಮ**' ಎಂದೇ ಅನ್ನಬೇಕಾಗುತ್ತದೆ. ವಾನರ ಹಂತದಿಂದ ಮಾನವ ಪ್ರಾದು ರ್ಭಾವ ಆಗಿದೆಯೆಂದು ಡಾರ್ವಿನ್ನನು ಪ್ರತಿಪಾದಿಸಿದರೂ ಇವೆರಡರ ನಡುವೆ ಈ **ನರ** ಹಂತವೂ ಇದ್ದಿರಬಹುದೆಂದು ನಾವಿಂದು **ನರ** ಎಂಬ ಶಬ್ದ ಪ್ರತಿಮೆಯ ಸಹಾಯದಿಂದ ತರ್ಕಿಸಬಹುದಾಗಿದೆ. (ಹೆಚ್ಚಿನ ಅಭ್ಯಾಸಕ್ಕೆ ಡಾ. ಶಂ. ಬಾ. ಜೋಶಿ ಅವರ 'ಮಾನವಧರ್ಮದ ಆಕೃತಿ' ಗ್ರಂಥ ಪರಿವೀಕ್ಷಿಸಿರಿ).

**ಮಾನವಧರ್ಮ**

ಇಲ್ಲಿಯವರೆಗಿನ ವಿವೇಚನೆಯಿಂದ, ವಿಶ್ವದಲ್ಲಿಯ ಪ್ರತಿಯೊಂದು ವಸ್ತು, ವರ್ಗ ಮತ್ತು ಜೀವಿವರ್ಗ ಇವುಗಳಿಗೆಲ್ಲ ಅವುಗಳದೇ ಆದ ವಿಶಿಷ್ಟ ಧರ್ಮ ಇರುತ್ತದೆಂಬುದು ಖಚಿತವಾಗುತ್ತದೆ. ಪಶುಧರ್ಮ, ಪುರುಷಧರ್ಮ, ಸ್ತ್ರೀಧರ್ಮ ಪುತ್ರಧರ್ಮ ಎಂಬ ಪದಗಳು ಇದೇ ವಿಷಯವನ್ನು ಸ್ಪಷ್ಟಗೊಳಿಸುತ್ತವೆ.

ವಿಶ್ವದಲ್ಲಿಯ ಮಾನವ : ಮನುಜರದೆಲ್ಲ ಒಂದು ವರ್ಗ. ಆದ್ದರಿಂದ ವಿಶ್ವ ದಲ್ಲಿಯ ಮನುಜ : ಮಾನವರಿಗೆಲ್ಲ ಒಂದೇ ಧರ್ಮ ಇರಲಿಕ್ಕೇ ಬೇಕು. ಅದುವೇ

ಮಾನವರ ಧರ್ಮ: ಮಾನವಧರ್ಮ. ಈ ಮಾನವಧರ್ಮದ ಸ್ವರೂಪ ಅರಿತುಕೊಳ್ಳಲು ಮಾನವ ಪ್ರಾದುರ್ಭಾವದ ವಿಷಯ ಮೊದಲು ಅರಿತುಕೊಳ್ಳಬೇಕಾಗುತ್ತದೆ.

ವಾನರ ಹಂತದಿಂದ ವಿಕಾಸಗೊಂಡು ಮಾನವನ ಪ್ರಾದುರ್ಭಾವವಾಗಿದೆಯೆಂದು ಪ್ರಸಿದ್ಧ ವಿಜ್ಞಾನಿ ಡಾರ್ವಿನ್ನನು ಪ್ರತಿಪಾದಿಸಿದನು. ಇವನ ಸಮಕಾಲೀನನೇ ಆದ ಇನ್ನೊಬ್ಬ ವಿಜ್ಞಾನಿ ವ್ಯಾಲ್ಲಾಸನು, ಡಾರ್ವಿನ್ನನ ಈ ಸಿದ್ಧಾಂತವನ್ನು ಪ್ರಶ್ನಿಸಿದನು. ದೈಹಿಕ ವಿಕಾಸದ ಮಟ್ಟಿಗೆ ಡಾರ್ವಿನ್ನನ ಸಿದ್ಧಾಂತ ಒಪ್ಪಬಹುದು. ಆದರೆ ಒಂದೇ ಬಗೆಯ ದೈಹಿಕ ಆಕೃತಿ ಹೊಂದಿದ, ವಾನರ ಹಂತದ ನಂತರದ, ನರ ಮತ್ತು ಮಾನವ (ಮನು–ಜ) ಇಬ್ಬರೂ ಒಂದೇ ಮಟ್ಟದವರೆಂಬುದನ್ನು (ಮಾನಸಿಕ ಶಕ್ತಿ : ಪ್ರಜ್ಞೆಯ ಬೆಳವಣಿಗೆಯ ಮಾನದಿಂದ) ವ್ಯಾಲ್ಲಾಸ ಒಪ್ಪಿಕೊಳ್ಳಲಿಲ್ಲ. ಏಕೆಂದರೆ, "ವಾನರ ಮತ್ತು ಮಾನವ" ಇವೆರಡೂ ಪ್ರಾಣಿವರ್ಗಗಳಲ್ಲಿ ಇರುವ ಜೀವನ ರೀತಿಯ ಅಂತರದಿಂದಾಗಿ 'ವಾನರ' ಧರ್ಮದ ತರುವಾಯ ನೇರವಾಗಿ ಮಾನವಧರ್ಮವೇ ಪ್ರಾದುರ್ಭವಿಸಿತು, ಎಂದು ಬಗೆಯಲು ವ್ಯಾಲ್ಲಾಸನ ವಿವೇಕವು ಅಡ್ಡ ಬಂತು. ನಿಸರ್ಗದಲ್ಲಿ ಒಂದು ಕ್ರಮವಿದೆ. ಪದ್ಧತಿಯಿದೆ. ನಿನ್ನೆ ಆದ ಬಳಿಕ ನಾಳೆಯೇ ಉದಯವಾಗುವುದಿಲ್ಲ. ಇವೆರಡನ್ನೂ ಜೋಡಿಸುವ 'ಇಂದು' ಇದು ಇರಲೇಬೇಕಾಗುತ್ತದೆ. 'ನಿನ್ನೆಯ ವಾನರ' 'ನಾಳೆಯ ಮಾನವ' ಇವೆರಡರ ನಡುವೆ ಇಷ್ಟು ಅಂತರವು ಹೇಗೆ? ಮನುಜ : ಮಾನವನು ಮನಃಶಕ್ತಿಯಿಂದ ಪ್ರಚೋದಿತನು ; ಅರ್ಥ : ಉದ್ದೇಶಪೂರ್ವಕ–ಬಾಳುವ ಜೀವನ ರೀತಿ ಮಾನವನದು. ಇವನ ಈ ಜೀವನ ರೀತಿಗೂ ಅರ್ಥ : ಉದ್ದೇಶದ ಅರಿವೂ ಇಲ್ಲದ ವಾನರವರ್ಗದ ಚಾಂಚಲ್ಯದ ಜೀವನ ರೀತಿಗೂ ಹಗಲು ಮತ್ತು ಇರುಳುಗಳಲ್ಲಿ ಇರುವಷ್ಟು ಅಂತರವಿದೆ.......ಇದನ್ನೇ ಇನ್ನೂ ಒಂದು ಬಗೆಯಲ್ಲಿ ಹೀಗೂ ಹೇಳಬಹುದು : ಮನುಜನಿಗೆ 'ಹಗಲು' ಮತ್ತು 'ರಾತ್ರಿ' ಎಂಬ ಭೇದವು ಮಾನ್ಯವಿದೆ. ಆದರೆ, ವಾ-ನರ ವರ್ಗದಲ್ಲಿ ಹಗಲು ಮತ್ತು ರಾತ್ರಿ ಇವೆರಡೂ ಸಮಾನವೇ ಸರಿ.

ಈ ಬಗೆಯ ಕಾರಣಗಳಿಂದಾಗಿ, ವಾನರ ವರ್ಗದ ತರುವಾಯ ನೇರವಾಗಿ 'ಮನುಜ' ವರ್ಗದ ಪ್ರಾದುರ್ಭಾವವೇ ಆಗಿದೆ, ಎಂದು ಬಗೆಯುವುದು ಸದೋಷವಿದೆ, ಎಂದು ವ್ಯಾಲ್ಲಾಸನ ಪ್ರಾಜ್ಞ ದೃಷ್ಟಿಗೆ ಹೊಳೆದ ವಿಚಾರವೇ ಸಮಂಜಸವಿದೆಯೆಂದು ಈಗ ಸಿದ್ಧವಾಗಿದೆ. ವ್ಯಾಲ್ಲಾಸನ ಅಭಿಪ್ರಾಯವನ್ನು ಸ್ಪಷ್ಟೀಕರಿಸಿ, ಆಧುನಿಕ ಸಂಶೋಧಕರಲ್ಲಿ ಕೆಲವರು ಈ ಹಂತವನ್ನು Missing Link (ಕಳೆದುಹೋದ ಕೊಂಡಿ) ಎಂದು ಹೆಸರಿಸಿದ್ದು ಅತ್ಯಂತ ಉಚಿತವಿದೆ."[4]

---

೪ ಡಾ. ಶಂ. ಬಾ. ಜೋಶಿ : ಮಾನವಧರ್ಮದ ಆಕೃತಿ (೧೯೭೯) ಕಾಲಗತಿ ಪ್ರಕಾಶನ ರಾಯಬಾಗ ಪುಟ ೧೨-೧೩

"ವ್ಯಾಲ್ಲಾಸನ Missing Link ಬಗೆಗಿನ ಅಂದಾಜು ಸಮರ್ಪಕವಿದೆ. ಎರಡು ಪ್ರಾದುರ್ಭಾವಗಳ ನಡುವೆ ಅಂತರವು (gap) ಉಳಿದದ್ದು ಕಾಣುವುದಿಲ್ಲ. ಜಲಚರಗಳ ತರುವಾಯ ಭೂಚರ ಪ್ರಾಣಿಗಳು ಪ್ರಾದುರ್ಭವಿಸಿದ್ದುಂಟು. ಆದರೆ ಕಪ್ಪೆ, ಆಮೆ, ಹಾವು ಇಂತಹ 'ಮಧ್ಯಸ್ಥ' ವರ್ಗವೂ ಒಂದು ಇದೆ. ಈ ಕಪ್ಪೆ, ಆಮೆ, ಹಾವು ನೀರಲ್ಲಿ ಇರಬಲ್ಲವು ; ನೆಲದ ಮೇಲೂ ಬಾಳಬಲ್ಲವು.

ಇದೇ ಮೇರೆಗೆ ಅಂಡಜ ಪ್ರಾಣಿ ಹಾಗೂ ಸಸ್ತನಿ ಪ್ರಾಣಿ, ಇವೆರಡೂ ವರ್ಗಗಳಿಗೂ ಹತ್ತಿರದ ಕಣ್ಕಪ್ಪಡಿ, ತೊಗಲ ಬಾವಲಿಗಳ ವರ್ಗವಿದೆ. ಈ ವಿಶ್ವನಿಯಮವು **ವಾನರ** ಮತ್ತು **ಮನುಜ** ಇವೆರಡೂ ಪ್ರಾದುರ್ಭಾವಗಳ ಸಂದರ್ಭದಲ್ಲಿ ಮಾತ್ರ ಅಪವಾದವಾಗಿರಲು ಶಕ್ಯವಿಲ್ಲ. ಭಾರತೀಯ ಪರಿಭಾಷೆಯು ಈ ದೃಷ್ಟಿಯಿಂದ ಅಮೋಘವಿದೆ. ನರ, ವಾನರ–ಬಂಧು, 'ಪ್ರಾಣದೇವರ' ಹೆಸರಿನಲ್ಲಿ 'ವಾನರ' ಪ್ರತಿಮೆ ಪೂಜಿಸುವ ವಾಡಿಕೆ ಇದೆ. ಈ ನರನು ವಾನರ ವರ್ಗಕ್ಕೆ ಹತ್ತಿರದವನು ಇರುವಂತೆ, ಮನು-ಜರ ಅಪ್ಪನೂ ಇದ್ದಾನೆ.

**"ನರನೇ ಪ್ರಜ್ಞೋದಯದ ಬಳಿಕ 'ಮನು-ಜ' ವರ್ಗದವನು** ಆಗುತ್ತಾನೆ."[5]

ಪಶು ಸಮಾನನಾಗಿದ್ದ ನರನಲ್ಲಿ ಪ್ರಜ್ಞೆಯು ಪ್ರಾದುರ್ಭಾವವಾಗಿ ಮನುಜತ್ವ ಪ್ರಾಪ್ತವಾಗಿದೆ. ಈ ಮನುಜನಿಗೆ ಮಾನವನೆಂದೂ ಕರೆಯಲಾಗುತ್ತದೆ. **ಮನುಜ; ಮಾನವ** ಈ ಪದಗಳೆರಡೂ ಒಂದೇ ಅರ್ಥದವು ; ಅಲ್ಲದೆ ಇವುಗಳ ಮೂಲದಲ್ಲಿಯೂ ಒಂದೇ ಬಗೆಯ ಅರ್ಥವಿದೆಯೆಂಬುದು ತಿಳಿದುಬರುತ್ತದೆ.

ಭಾರತೀಯ ಪರಂಪರೆಯಲ್ಲಿಯ ವೈವಸ್ವತಮನು ಇವನು ಪ್ರಕಾಶದ–ಪ್ರಜ್ಞೆಯ ಸಂಕೇತ. ಈ ಪ್ರಜ್ಞಾರೂಪೀ ಮನುವಿನ ಮಕ್ಕಳೇ 'ಮನು-ಜ'ರು. ಮನು-ಜ ಎಂಬೀ ಶಬ್ದಪ್ರತಿಮೆಯಿಂದ, ಪಶು ಸಮಾನವಾಗಿದ್ದ ನರನಲ್ಲಿ ಪ್ರಜ್ಞೆಯು ಉದಯವಾಗಿ ಅವನು ಮನು-ಜ ಆದನೆಂಬುದು ಹೊಳೆಯುತ್ತದೆ.

'**ಮಾನವ**' ಪದದ ಮೂಲ ಮನ. ಮನವುಳ್ಳವನೇ ಮಾನವ. ಈ **ಮನ** ಎಂಬಲ್ಲಿ ಪ್ರಜ್ಞಾಶಕ್ತಿಯೊಡನೆ ಬದ್ಧವಾದ ಮನವೆಂದೇ ಅರ್ಥ. ಹೀಗೆ '**ಮಾನವ**' ಎಂಬ ಶಬ್ದಪ್ರತಿಮೆಯೂ ಕೂಡ ನರನಲ್ಲಿ ಪ್ರಜ್ಞೋದಯವಾಗಿ ಅವನು ಮಾನವನಾದನೆಂಬುದನ್ನು ಧೃಡಪಡಿಸುತ್ತದೆ.

ಈ ರೀತಿಯಿಂದ, **ಮನುಜ** ಮತ್ತು **ಮಾನವ** ಈ ಶಬ್ದಪ್ರತಿಮೆಗಳೆರಡೂ **ಮಾನವ ಪ್ರಾದುರ್ಭಾವದ** ಇತಿಹಾಸವನ್ನು ಸ್ಪಷ್ಟವಾಗಿ ಅಭಿವ್ಯಕ್ತ ಮಾಡುತ್ತವೆ.

---

೫. ಅದೇ ಪುಟ : ೧೬

ಮತ್ತು ಪ್ರಜ್ಞಾಶಕ್ತಿಯೊಡನೆ ಬದ್ಧ ಮನಸ್ಸಿನ ಅಂತಃಪ್ರಚೋದನೆಯಿಂದ ತನ್ನ ನಡೆನುಡಿ ರೂಪಿಸಿಕೊಳ್ಳುವವನು ಮಾತ್ರ ಮಾನವ: ಮನುಜ ಎಂಬುದನ್ನು ಇವು ವಿಶದೀಕರಿಸುತ್ತವೆ.

ನರನನ್ನು ಮಾನವ: ಮನು–ಜನನ್ನಾಗಿಸಿದ ಈ ಪ್ರಜ್ಞೆಯು ಮಾನವನಿಗೆ ಮಾತ್ರ ಲಭಿಸಿದ ಒಂದು ವಿಶೇಷ ಶಕ್ತಿ. ಈ ಶಕ್ತಿಯ ಸ್ವರೂಪವನ್ನು ಅರಿಯಲು ಪ್ರಸಿದ್ಧ ಕಾವ್ಯಶಾಸ್ತ್ರಜ್ಞರಲ್ಲೊಬ್ಬನಾದ ಭಟ್ಟತೌತನ ಶ್ಲೋಕವೊಂದು ನಮಗೆ ನೆರವಾಗುತ್ತದೆ.

ಸ್ಮೃತಿಃ ವ್ಯತೀತ ವಿಷಯಾ, ಮತಿಃ ಆಗಾಮಿಗೋಚರಾ ।
ಬುದ್ಧಿಃ ತಾತ್ಕಾಲಿಕೀ ಜ್ಞೇಯಾ, ಪ್ರಜ್ಞಾ ತ್ರೈಕಾಲಿಕೀ ಮತಾ ।
ಪ್ರಜ್ಞಾಂ ನವನವೋನ್ಮೇಷಶಾಲಿನೀಃ ಪ್ರತಿಭಾಂ ವಿದು ॥

ಪ್ರಜ್ಞೆಯ ಬಗೆಗೆ ಉಪಯುಕ್ತ ವಿಷಯ ಇಲ್ಲಿ ಹೇಳಲಾಗಿದೆ. ಭೂತ, ವರ್ತಮಾನ ಮತ್ತು ಭವಿಷ್ಯ ಎಂಬ ಮೂರೂ ಕಾಲಗಳಲ್ಲಿ ವ್ಯವಹರಿಸಬಲ್ಲ ಶಕ್ತಿ ಪ್ರಜ್ಞೆಗಿದೆ ಯೆಂಬುದನ್ನು ಖಚಿತ ಮಾತುಗಳಲ್ಲಿ ಸೂಚಿಸಲಾಗಿದೆ. ಕಾಲತ್ರಯಗಳನ್ನು ಗ್ರಹಿಸಬಲ್ಲ–ವಿವೇಚಿಸಬಲ್ಲ–ಸಂಯೋಜಿಸಬಲ್ಲ ಈ ಪ್ರಜ್ಞಾಶಕ್ತಿಯು ಪ್ರಕಾಶರೂಪದಲ್ಲಿಯೇ ಇರಬಲ್ಲದು. ಏಕೆಂದರೆ, ಪ್ರಕಾಶದಲ್ಲಿಯೇ ನಾವು ಏನೆಲ್ಲ ಕಾಣಬಲ್ಲೆವು.

ಭಾರತೀಯ ಪರಂಪರೆಯಲ್ಲಿಯ ಮೂಲ ಮನು,ಅಂದರೆ ವೈವಸ್ವತಮನುವೂ ಪ್ರಕಾಶದ ಸಂಕೇತವೇ ಆಗಿದ್ದಾನೆ.

'ತ್ರೈಕಾಲಿಕೀ' ಶಕ್ತಿಯಾದ ಪ್ರಜ್ಞೆ ಇರುವುದು ಮಾನವರಲ್ಲಿ ಮಾತ್ರ, ಎಂಬುದನ್ನೂ ನಾವೀಗ ಅರಿತಿದ್ದೇವೆ. ಮನುಜ ; ಮಾನವನನ್ನು ರೂಪಿಸುವ ಪ್ರಜ್ಞಾಶಕ್ತಿಯೊಡನೆ ಬದ್ಧ ಮನಸ್ಸನ್ನು ಪಾಶ್ಚಾತ್ಯ ಪರಂಪರೆಯ ಆರಂಭ ಕಾಲದಲ್ಲಿ 'Nous' ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತೆಂಬುದಾಗಿ ತಿಳಿದು ಬರುತ್ತದೆ.

ಪ್ರಜ್ಞೆ(Nous)ಯಿಂದ ಪ್ರಚೋದನೆಗೊಂಡು ತನ್ನ ಕಾರ್ಯ ಚಟುವಟಿಕೆಗಳನ್ನು ನಡೆಯಿಸುವ–ನಡೆನುಡಿಗಳನ್ನು ರೂಪಿಸುವ ಧರ್ಮವೇ '**ಮಾನವಧರ್ಮ**'. ಏಕೆಂದರೆ ಮಾನವನನ್ನು ಇತರ ವರ್ಗಗಳಿಂದ ಪ್ರತ್ಯೇಕಿಸಿ, ಅವನಿಗೆ ಮಾನವತ್ವ ದೊರಕಿಸಿಕೊಟ್ಟ, ಮಾನವಸ್ಥ ವಿಶ್ವನಿಯಮರೂಪೀ ಅಂತಃಪ್ರಚೋದಕಶಕ್ತಿಯೆಂದರೆ ಈ ಪ್ರಜ್ಞೆಯಾಗಿದೆ. ಇಂಥ ಈ ಮಾನವಧರ್ಮ ಜಗತ್ತಿನಲ್ಲಿಯ ಮಾನವರಿಗೆಲ್ಲ ಒಂದೇ ಆಗಿದೆ.

## ಮಾನವಧರ್ಮದ ಸ್ವರೂಪ

'ಮಾನವಧರ್ಮ' ಎಂದೊಡನೆ ಇದೂ ಒಂದು ಮತವೆಂದು ತಿಳಿದುಕೊಳ್ಳಬಾರದು. ಮತ್ತು ಮತಗಳಿಗಿರುವ ೧) ಸಿದ್ಧಾಂತಗಳು ೨) ತತ್ತ್ವಗಳು ೩) ಆಚರಣೆಗಳು ಮುಂತಾದವು ಈ 'ಮಾನವಧರ್ಮ'ಕ್ಕೆ ಸಂಬಂಧಿಸಿದಂತೆ ಇರುವಂಥವು ಯಾವವು ಎಂದೂ ಕೇಳಬಾರದು. 'ಧರ್ಮ' ಮತ್ತು 'ಮತ' ಇವುಗಳಲ್ಲಿ ಮೂಲ ವ್ಯತ್ಯಾಸವಿರುವ ಸಂಗತಿಯನ್ನು ಈಗಾಗಲೇ ವಿವರವಾಗಿ ಚರ್ಚಿಸಲಾಗಿದೆಯಾದ್ದರಿಂದ ಇಲ್ಲಿ ಮತ್ತೆ ವಿವರಿಸುವ ಅಗತ್ಯವಿಲ್ಲ.

೧) ಮಾನವಧರ್ಮದಂತೆ ಬಾಳುವವರು ಪ್ರಜ್ಞಾಯುಕ್ತ ಮನಸ್ಸಿನ ಪ್ರಚೋದನೆಯಿಂದ ಜೀವನ ಸಾಗಿಸುವವರಾದ್ದರಿಂದ ಅವರ ನಡೆನುಡಿಯಲ್ಲಿ ಅಂತಃಸಂಗತಿಯಿರುತ್ತದೆಯೆಂದು ಹೇಳಬೇಕಾಗುತ್ತದೆ. ಅಂತಃಸಂಗತಿಯುಕ್ತ ಜೀವನದಲ್ಲಿ (ವಿಸಂಗತಿಯಿಲ್ಲವಾದ್ದರಿಂದ) ಹೊಂದಿಕೆಯಿರುತ್ತದೆ.

೨) ದೇಶಾತೀತ ಮತ್ತು ಕಾಲಾತೀತ ವಿಷಯಗಳನ್ನು, ನೈತಿಕಾಚರಣೆಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಮಾನವಧರ್ಮ ಪ್ರಚೋದಿಸುತ್ತದೆ.

೩) ಸಮಷ್ಟಿ : ಸಮಾಜದ ಬಗೆಗೆ ಮಾನವಧರ್ಮಕ್ಕೆ ವಿಶೇಷ ಆಸಕ್ತಿ. ಏಕೆಂದರೆ ಪ್ರಜ್ಞಾಪ್ರಾದುರ್ಭಾವಕ್ಕೂ ಸಮಷ್ಟಿ:ಸಮಾಜಕ್ಕೂ ನೇರ ಸಂಬಂಧ.ನಿನ್ನೆ–ಇಂದು ನಾಳೆಗಳೆಂಬ ಅರಿವಿನ ಈ ಪ್ರಜ್ಞೆ ಮಾನವನಲ್ಲಿ ಪ್ರಾದುರ್ಭವಿಸಿದುದರ ವ್ಯಕ್ತರೂಪವೇ ಭಾಷೆ. ಏಕೆಂದರೆ ಭಾಷೆಯೇ ಮಾನವನಿಗೆ ನಿನ್ನೆ–ಇಂದು–ನಾಳೆಗಳ ಜ್ಞಾನವನ್ನು ಹಿಡಿದಿಡುವ–ಒದಗಿಸುವ–ಏಕಮೇವ ಸಾಧನ. ಆದ್ದರಿಂದ ಈ ಭಾಷೆಯೆಂಬುದು 'ಮಾನವಧರ್ಮ'ದ ಒಂದು ಮುಖ್ಯ ಆಧಾರ. ಇನ್ನು ಈ ಭಾಷೆಗೆ ಸಮಾಜ ಸಮಷ್ಟಿ ಅನಿವಾರ್ಯ. ಸಮಾಜವಿಲ್ಲದಿದ್ದರೆ ಭಾಷೆಯು ಅಗತ್ಯವೇ ಇಲ್ಲ. ಆದ್ದರಿಂದ ಪ್ರಜ್ಞಾ ಪ್ರಚೋದಿತ ಜೀವನ ರೀತಿಯು ಮಾನವಧರ್ಮಕ್ಕೆ ಸಮಾಜ : ಸಮಷ್ಟಿ ಅಪರಿಹಾರ್ಯ. ಸಮಾಜವನ್ನು ತೊರೆದು ಅಡವಿ ಸೇರಿ 'ಮುನಿ'ಯಾಗುವುದು ಈ ಧರ್ಮಕ್ಕೆ ಸಂಗತವಲ್ಲ.

೪) ಪ್ರಜ್ಞಾ ಶಕ್ತಿಯೊಡನೆ ಬದ್ಧ ಮನಸ್ಸಿನ ಪ್ರಚೋದನೆಗೆ ಬದ್ಧವಾಗಿ ನಡೆಯಿಸುವ ಕಾರ್ಯ–ಚಟುವಟಿಕೆಗಳು ಸ್ವಾಭಾವಿಕವಾಗಿ ಜೀವನ ವಿಶ್ವಸ್ಥ ನಿಯಮಗಳಿಗೆ ಸಂಗತವಾಗಿರುತ್ತವೆ.ಅನವಶ್ಯಕ ನಿಯಂತ್ರಣ ಮತ್ತು ಸ್ವೇಚ್ಛೆ ಎರಡೂ ಮಾನವಧರ್ಮದಿಂದ ದೂರ.

## ಮಾನವಧರ್ಮದ ಪುನರುತ್ಥಾನ

'ಮಾನವ ಧರ್ಮ' ಹಿಂದೊಮ್ಮೆ ಭಾರತದಲ್ಲಿ ಇತ್ತು. ಪ್ರಜ್ಞಾಪ್ರಕಾಶದ ಸಂಕೇತವೆಂದು ವೈವಸ್ವತಮನುವನ್ನು ಮಾನವಧರ್ಮದವರು ಆರಾಧಿಸುತ್ತಿದ್ದರು.

ಅಂದರೆ ಅವರು ಬೆಳಕಿನ : ಪ್ರಜ್ಞೆಯ ಆರಾಧಕರಾಗಿದ್ದರು. ಆ ಮಾನವಧರ್ಮ ಇಂದು ಇಲ್ಲವಾಗಿ,ಆದರ ಸ್ಥಳದಲ್ಲಿ ಲೈಂಗಿಕ ಪಾತಳಿಯ, ಸಮಾಜ : ಸಮಷ್ಟಿಯಿಂದ ವಿಮುಖರನ್ನಾಗಿಸುವ ಮತಗಳು ಭಾರತದಲ್ಲಿ, ಜಗತ್ತಿನಲ್ಲಿ ಅಟ್ಟಹಾಸ ಮಾಡುತ್ತಲಿವೆ. ಈ ಮತಗಳ ಅಟ್ಟಹಾಸ ನಿಲ್ಲದ ಹೊರತು ಮಾನುಕುಲಕ್ಕೆ ಶಾಂತಿ ಸಮಾಧಾನಗಳಿಲ್ಲ. ಆದ್ದರಿಂದ, ಇಂದಿನ ಮತ-ಮತಗಳ ಮೇಲಿನ ವ್ಯಾಮೋಹ ತೊರೆದು ಪ್ರಜ್ಞಾವಂತ ಮಾನವರಾಗುವ ಮೂಲಕ ಎಲ್ಲರೂ 'ಮಾನವಧರ್ಮ' ಅಪ್ಪಿಕೊಳ್ಳುವುದು ಅಗತ್ಯದ ಕಾರ್ಯವಾಗಿದೆ.

---

# ಮಾನವ ಧರ್ಮದ ಅಸ್ತಿತ್ವದ ಪುರಾವೆಗಳು ಮತ್ತು ದೇವರ ವಿಚಾರ

ಡಾ|| ಶಂ. ಬಾ. ಜೋಶಿ

## ಭಾಗ-೧

## I

'ವೈವಸ್ವತ ಮನ್ವಂತರೇ' ಎಂಬ ಸಂಕಲ್ಪ ಮಂತ್ರವು ನಿತ್ಯ ಆಹ್ನಿಕದಲ್ಲಿ-ಆಚರಣೆಯಲ್ಲಿ ಇರುವ ವಾಡಿಕೆಯು ಕೆಲವೊಂದು ವರ್ಗವು ಭಾರತದ ಎಲ್ಲಾ ಭಾಗಗಳಲ್ಲಿಯೂ ಇಂದಿಗೂ ಉಂಟು, ಎಂದು ಬರೆಯಲು ಅವಕಾಶವಿದೆ.

(೧) ಕರ್ನಾಟ- ಮಹಾರಾಷ್ಟ್ರದ ಹಾರುವರೆಂಬುವರಲ್ಲಿ ಈ ಪಾಠವು ಹೀಗಿದೆ; "ಗೋದಾವರ್ಯಾಃ ದಕ್ಷಿಣೇ ತೀರೇ ವೈವಸ್ವತ ಮನ್ವಂತರೇ" **ತಾವು ವಿವಾಹಾದಿ ಕಾರ್ಯಗಳನ್ನು ಜರುಗಿಸಲಿದ್ದೇವೆ ಇಂದು** ಎಂಬ ಅರ್ಥದ ಈ ಮಂತ್ರವು ಮನು> ಮಾನವ ಧರ್ಮದ ಅಸ್ತಿತ್ವವು ಇಂದಿಗೂ ಉಂಟು ಎಂಬುದನ್ನು ಅರಿಕೆಗೆ ತಂದು ಕೊಡುತ್ತದೆ.

ವಿಶ್ವಕರ್ಮ ಬ್ರಾಹ್ಮಣ ವರ್ಗದಲ್ಲಿಯೂ ವೈವಸ್ವತ ಮನ್ವಂತರದ ಮಂತ್ರ ಪಾಠವಿರುವುದಾಗಿ ಈ ಸಂಪ್ರದಾಯದ ಮಿತ್ರರಿಂದ ಕೇಳಿದ್ದೇನೆ. ಇವರು 'ಗೋದೆ'ಯ ಬದಲು 'ಕೃಷ್ಣಾತೀರೇ' ಎಂದು ಹೇಳುವ ವಾಡಿಕೆ ಇದೆಯಂತೆ.

೨) ತಮಿಳ ದೇಶದ ಮಂತ್ರಪಾಠವು ಮುಂಬೈಯಲ್ಲಿರುವ ಡಾ॥ ನಾಗರಾಜ ಸಿಬಾದಲ್ಲಿದ್ದ (CIBA) ಸಂಶೋಧಕರ ಮೂಲಕ ನನಗೆ ತಿಳಿಯಿತು. ಆ ಭಾಗದಲ್ಲಿ ವೈವಸ್ವತ ಮನ್ವಂತರ ಪಾಠವು "ಮೇರೋಃ ದಕ್ಷಿಣೇ ಪಾರ್ಶ್ವೇ" ಎಂಬ ಭೌಗೋಲಿಕ ಉಲ್ಲೇಖನವುಳ್ಳದ್ದು ಉಂಟು.

೩) ಸಿಬಾ (CIBA) ಮುಂಬೈ ಸಂಸ್ಥೆಯಲ್ಲಿರುವ ಡಾ॥ ಅಶೋಕ ವೈದ್ಯರು ಗುಜರಾಥ ಭಾಗದಲ್ಲಿ ವಾಡಿಕೆಯಲ್ಲಿರುವ ಮಂತ್ರಪಾಠದಲ್ಲಿ 'ಸೌರಾಷ್ಟ್ರ' ಉಲ್ಲೇಖ ಇರುವುದಾಗಿ ಬರೆದು ತಿಳಿಸಿದ್ದಾರೆ.

೪) ಆಂಧ್ರ ಭಾಗದಲ್ಲಿ ಈ ಮಂತ್ರವು'ಶ್ರೀಶೈಲ'ದ ಉಲ್ಲೇಖನದೊಡನೆ ಇದೆ.

ಇಂತಹ ಪ್ರಮಾಣಗಳನ್ನು ಕಾಶ್ಮೀರ ಬಂಗಾಲದ ಭಾಗದಿಂದಲ್ಲೂ ಪಡೆದು ಕಳಿಸುವುದಾಗಿ ನನ್ನ ಮಿತ್ರರು ತಿಳಿಸಿದ್ದಾರೆ. ಹೀಗೆ ವಿವಿಧ ಭೌಗೋಲಿಕ ಉಲ್ಲೇಖನಗಳೊಡನೆ ಇರುವ ಈ ವೈವಸ್ವತ-ಮಾನವ ಧರ್ಮದ ಅಸ್ತಿತ್ವವು ಜೀವಂತವಾಗಿ ಹಿಂದೊಮ್ಮೆ ಇತ್ತು, ಎಂಬುದನ್ನು ಅಲ್ಲಗಳೆಯಲು ಆದೀತೇ ?

## II

**ಹಾಗಾದರೆ ಇಂದಿನ ಈ ಸಂದಿಗ್ಧ ಪರಿಸ್ಥಿತಿಯು ತಲೆದೋರಿರಲು ಕಾರಣವೇನು ?**

೧) ಪ್ರಚಲಿತ ವೇದದಲ್ಲಿಯೇ ನಿರ್ದಿಷ್ಟವಿರುವ 'ನಿರಗ್ನಿ' (ನ-ಚಿಕೇತಾಗ್ನಿ) ಆರಾಧಕರು, ಅನೀಂದ್ರರು: ಇಂದ್ರ(ಸೂರ್ಯ)ನ ಶತ್ರುಗಳು, ಆಸು (ಪ್ರಾಣ) ದೇವರ ಆರಾಧಕರು ಇಂತಹರ ವಿರೋಧದಿಂದ ಮನು> ಮಾನವ ಧರ್ಮ ಸಂಪ್ರದಾಯವು ಹೇಳ ಹೆಸರಿಲ್ಲದ ಅವಸ್ಥೆಗೆ ಬಂದಿದೆ.

ಸೌರಮನುವನ್ನು ಇಲ್ಲವಾಗಿಸಲು ಚಾಂದ್ರಮನು ಸಂಪ್ರದಾಯವು ತಲೆಯೆತ್ತಿದಕ್ಕೆ ಸ್ವಯಂಭೂ> ಸ್ವಾಯಂಭುವ ಮನುಸ್ಮೃತಿಯೇ ಇದಕ್ಕೆ ಪ್ರಮಾಣ.

ವೈವಸ್ವತ ಸಂಪ್ರದಾಯದ ಮನುಸ್ಮೃತಿಯು ನಷ್ಟವಾಗಿ ಅದರ ಸ್ಥಳದಲ್ಲಿ ಸ್ವಾಯಂಭುವ (ಚಾಂದ್ರ) ಸಂಪ್ರದಾಯದ ಧರ್ಮಗ್ರಂಥವು ಪ್ರಚಾರದಲ್ಲಿರುತ್ತದೆ ! **ಆದ್ಯ** ಮನು ಮತ್ತು ಸ್ವಯಂಭೂ ಮನು ಇವರ ಅನುಕ್ರಮವನ್ನು ತಪ್ಪಿಸಲು ಮಾಡಲಾಗಿರುವ ಕೈಚಳಕವು ಬಯಲಿಗೆ ಬಂದಿದೆ. ಇಂದಿನ ವೇದದಲ್ಲಿಯೂ, ಎಂತೋ ವಿವಸ್ವತ, ವೈವಸ್ವತ ಹೆಸರು ಇದ್ದು ಸ್ವಯಂಭೂ> ಸ್ವಾಯಂಭುವನ ಹೆಸರೇ ಇಲ್ಲ !

ಆದರೂ ವಿವಸ್ವತನನ್ನು ಏಳನೆಯವನೆಂದೂ ಸ್ವಾಯಂಭುವನನ್ನು ಮೊದಲನೆಯವನೆಂದೂ ಸಾಯಣಭಾಷ್ಯವು ಹೇಳುವ ಸಾಹಸ ಮಾಡಿದೆ, ಸಲಿಲ ರೂಪೀ ಆದಿತ್ಯಪುತ್ರನೆಂಬ ಮಾರ್ತಾಂಡ= ಆದಿತ್ಯರ ಜನನದ (ಎಂದರೆ ಸಲಿಲ ಜಲ ಪುತ್ರ ಚಂದ್ರನ) ಸೂಕ್ತದಲ್ಲಿ ! (X-೭೨.೭/೮).

ಪುರಾತನ ಸಂಪ್ರದಾಯದಲ್ಲಿ ಪ್ರಕಾಶ ತತ್ತ್ವದ ಉಪಾಸಕರು ವೈಶ್ವಕ (Universal) ದೃಷ್ಟಿಕೋನದವರು ಇದ್ದರೆ ಇವರಿಗೆ ಪ್ರತಿಯಾಗಿ ತಲೆಯತ್ತಿದ ಚಾಂದ್ರ ಪಂಥದಲ್ಲಿ ವಿಶಿಷ್ಟಕ್ಕೆ ಮಹತ್ವ ಬಂತು ! ಮಾನವನು ನರ = ವ್ಯಕ್ತಿಯಾಗಿ ಮಾರ್ಪಟ್ಟದ್ದು ಈ ಸಂಪ್ರದಾಯದ ಪ್ರಭಾವದಲ್ಲಿಯೇ, ವಿಶಿಷ್ಟ ಜಾತಿ ಪಂಥಗಳಿಗೆ ಪುಟ ದೊರತದ್ದು ಈ ಚಾಂದ್ರ ಸಂಪ್ರದಾಯದ ಪ್ರಭಾವದಲ್ಲಿಯೇ.

ಡಾ॥ ಅಂಬೇಡಕರರನ್ನು ರೊಚ್ಚಿಗೆ ಎಬ್ಬಿಸಿದ್ದು ಸ್ವಾಯಂಭುವನ ಮನುಸ್ಮೃತಿಯೇ. ವೈವಸ್ವತ ಸಂಪ್ರದಾಯವನ್ನು ಹಿಮ್ಮೆಟ್ಟಿಸಿ ಸ್ವಾಯಂಭುವ ಸಂಪ್ರದಾಯವೂ ತಲೆಯೆತ್ತಿದೆ ಎಂಬುದು ಡಾ॥ ಅಂಬೇಡಕರರ ಗಮನಕ್ಕೆ ಬರಲೇ ಇಲ್ಲ. ಪ್ರವೃತ್ತಿಪರ ಜೀವನ ದೃಷ್ಟಿಯ ಡಾ॥ ಅಂಬೇಡಕರರು **'ಹಿಂದೂ'** ಎಂಬ ಸಂಭ್ರಾಮಕ ಹೆಸರಿನ ಧರ್ಮದ ಮೇಲೆ ಸಿಟ್ಟಾಗಿ 'ಕ್ಷಣ ಭಂಗುರ' ವಾದದ ಬೌದ್ಧ ಮತವನ್ನು ಸ್ವೀಕರಿಸಿದ್ದು ಅಷ್ಟು ಪ್ರಶಸ್ತವಾಗಲಿಲ್ಲ -ಅವರ ಅನುಯಾಯಿಗಳ ಏಳ್ಗೆಯ ದೃಷ್ಟಿಯಿಂದ.

೨) 'ವೈವಸ್ವತ ಮನ್ವಂತರೇ' ಎಂಬ ಮಂತ್ರಪಾಠದಲ್ಲಿಯೇ ಮಾಡಲಾಗಿರುವ ವ್ಯತ್ಯಾಸವು ಅಭ್ಯಸನೀಯವಿದೆ.

ಪ್ರೊ. ಸಾ. ಕೃ. ರಾಮಚಂದ್ರರಾಯರು ಪ್ರಚಲಿತ ಸಂಕಲ್ಪವನ್ನು 'ಮಹಾ ಸಂಕಲ್ಪ' ಎಂದು ಹೆಸರಿಸಿದ್ದಾರೆ. **ಮಹತ್** ಈ ವಿಶೇಷಣವು ತೈತ್ತಿರೀಯ ಉಪನಿಷತ್ತಿನಲ್ಲಿ **ಚಂದ್ರ ಆದಿತ್ಯರ ಸಂದರ್ಭದಲ್ಲಿದೆ** (೧.೫) 'ಮಹಃ ಇತಿ ಬ್ರಹ್ಮ। ಮಹಃ ಇತಿ ಚಂದ್ರಯಾ। ಮಹಃ ಇತಿ ಆದಿತ್ಯಃ' ಈ ಕಾರಣದಿಂದಾಗಿ 'ಮಹಾ' ಸಂಕಲ್ಪವು ಚಂದ್ರಾऽऽದಿತ್ಯ ಸಂಪ್ರದಾಯದವರ ಕಲ್ಪಿತ ಕೃತಕ ಸಂಕಲ್ಪವಾಗಿದೆ.

ಸ್ವಲ್ಪ ಆಳದಲ್ಲಿ ಸೇರಿದರೆ ಇದರ ಬಣ್ಣ ಇನ್ನೂ ಚೆನ್ನಾಗಿ ಬಯಲಿಗೆ ಬರುತ್ತದೆ.

## III

'ವಿಷ್ಣು ರಾಜ್ಞಯಾ' ಹೇಳಲಾಗುವ ಈ ಮಹಾ ಸಂಕಲ್ಪದಲ್ಲಿ ಬರುವ 'ಶ್ವೇತ ವರಾಹ> ವಾರಾಹ ಕಲ್ಪ' ಈ ಸಾಂಕೇತಿಕತೆಯಲ್ಲಿ ಅಡಗಿರುವ ಅರ್ಥವೇನು ? ಈ 'ಶ್ವೇತ' ಸಂಕೇತದ ನಿಶ್ಚಿತ ಅರ್ಥವೇನು ? **ನಾರ** ಅಯನ ಭಕ್ತ **ನಾರ** ದನು ನಾರಾಯಣನ ಸಾಕ್ಷಾತ್ ದರ್ಶನಕ್ಕಾಗಿ **'ಶ್ವೇತ'** ದ್ವೀಪಕ್ಕೆ ಹೋದನು ಎಂಬ ಪವಾಡ ಕಥೆ, ಮಹಾಭಾರತದ ನಾರಾಯಣೋಪಾಖ್ಯಾನದಲ್ಲಿ ಇದೆ. ಈ 'ಶ್ವೇತ ದ್ವೀಪ' ವು ಪಾಶ್ಚಾತ್ಯ ಕ್ರೈಸ್ತ ಭಕ್ತರನ್ನೂ ಆಕರ್ಷಿಸಿತು ! (ಬಿತ್ತಿದ್ದನ್ನು ಬೆಳಕೊ ಪುಟ ೧೩೫-೬).

ದಿಗಂಬರರು ಪ್ರಾಚೀನರೋ, ಶ್ವೇತಾಂಬರರು ಪ್ರಾಚೀನರೋ ? ವಸನ ಪರಿತ್ಯಾಗದ ಸ್ಥೂಲ ಅರ್ಥವು 'ದಿಗಂಬರ' ಸಂಕೇತದಲ್ಲಿದೆ. ಆದರೆ ಸೂಕ್ಷ್ಮ ಅರ್ಥದಲ್ಲಿ ತೀರ ವಾಸ್ತವ ಅರ್ಥದಲ್ಲಿ ತೊಗಲಿನ ಹೊದಿಕೆಯೂ ಇರಕೂಡದು. ಶ್ವೇತಃ ಧವಲಃ ಅ-ಮೃತ ರಸ-ಶುಕ್ರ : ರೇತ ಇದೇ ತಳಹದಿ ತಾನೇ ?

ಚಾಂದ್ರ ಸಂಪ್ರದಾಯದ ಅ-ಮೃತ ತತ್ತ್ವೋಪಾಸಕರ ಶ್ವೇತ ಪದಕ್ಕೆ ಬೇರೆ ಅರ್ಥವು ಇರಲಾರದು. ಈ ಸಂಕೇತಗಳ ಮರ್ಮಜ್ಞ ರಾಬರ್ಟ್ ಗ್ರೇವ್ಸ ಕವಿಯು "White Goddess" ರೂಪದಲ್ಲಿ ಕಂಡಿದ್ದಾನೆ. ಈ ಶ್ವೇತ ತತ್ತ್ವವನ್ನು !

ಶ್ವೇತ ಸಂಕೇತವಂತೂ ಸರಿ. ಕ್ಷೀರ ಸಾಗರ ಶಯನ ವಿಷ್ಣು ಸಂಪ್ರದಾಯದಲ್ಲಿ **ವರಾಹ** ದೇವರು ಉಂಟು. ಈ ವಿಷ್ಣು ! ಆದಿತ್ಯ ಸಂಪ್ರದಾಯವು ವಿವಸ್ವತ> ವೈವಸ್ವತ ಸಂಪ್ರದಾಯದ ದ್ವೇಷಿಯಾಗಿತ್ತು ಎಂಬುದನ್ನು ದೃಢಪಡಿಸುವ ಹಲವು ಪ್ರಮಾಣಗಳು ದೊರೆಯುತ್ತವೆ. 'ವೈವಸ್ವತನಿಗೆ ಯೋಗ ಬೋಧಿಸಿದನು' ಎಂಬ ವರ್ಣನೆಯು ಗೀತೆಯೇ ಇದಕ್ಕೆ ಪ್ರಮಾಣ.

ಸ್ವಯಂಭೂ ಮನುವನ್ನು ನಿರ್ಮಿಸಿದಂತೆ, ಶ್ವೇತ ವರಾಹವನ್ನು ಸೃಷ್ಟಿಸಿ 'ವೈವಸ್ವತ ಮನ್ವಂತರ' ಸಂಪ್ರದಾಯವನ್ನು ಹಿಮ್ಮೆಟ್ಟಿಸುವ ಪ್ರಯತ್ನಗಳಾಗಿವೆ. **ಮನ್ವಂತರಕ್ಕೆ** ಪ್ರತಿಯಾಗಿ **'ಕಲ್ಪ'** ಎಂಬ ಪರಿಭಾಷೆಯು ರೂಢಿಗೆಬಂದುದುಂಟು! ಇಂದಿನ ವೇದದಲ್ಲಿಯೇ ಈ 'ಕಲ್ಪಯಂತೀ' ಸಂಪ್ರದಾಯಕ್ಕೆ ಸ್ಥಾನವು ದೊರೆತಿದೆ 'ಏಕಂ ಸಂತಂ' ವಿಪ್ರಾಃ ಕವಯಃ ಬಹುಧಾ ಕಲ್ಪಯಂತಿ' (X-೧೧೪)ಇದು ಚಾಂದ

ಸಂಪ್ರದಾಯ ಕಾಲಗಣನೆಯಲ್ಲಿಯೂ,ಈ ಸಂಪ್ರದಾಯದ ಸ್ವೈರ ಕಲ್ಪನಾ ವಿಲಾಸವು ಕಂಡುಬರುತ್ತದೆ ! ಒಂದು 'ಕಲ್ಪ' ಎಂದರೆ, a fabulous period of time : ಬ್ರಹ್ಮನ ಒಂದು ದಿನ ಎಂದರೆ ಅದು ಸಾವಿರ ಯುಗಗಳು, a period of ೪ ಸಾವಿರ ಮೂರನೂರಾ ಇಪ್ಪತ್ತು ದಶಲಕ್ಷ ಮರ್ತ್ಯರ ವರುಷಗಳು, ಇಂತಹ ಮೂವತ್ತು ಕಲ್ಪಗಳು ಬ್ರಹ್ಮನ ಒಂದು ವರ್ಷ ! ಈ 'ಶ್ವೇತ ವರಾಹ ಕಲ್ಪ'ವನ್ನು ವೈವಸ್ವತ ಮನ್ವಂತರ ಮಂತ್ರದ ಪ್ರಾರಂಭಕ್ಕೆ ಸೇರಿಸಲಾಗಿದೆ !

'ನಿಯಂತ್ರಿಕೃತ ನಿಯಮ ರಹಿತ' ಕಲ್ಪನಾ ವಿಲಾಸಕ್ಕೆ ಆಸ್ಪದವಿರುವ ಈ ಚಾಂದ್ರ ಸಂಪ್ರದಾಯವು ಸೌರ ಪರಂಪರೆಯ ಋತಸ್ವರೂಪೀ ವಿಶ್ವನಿಯಮವನ್ನು ಗಾಳಿಗೆ ತೂರಿದೆ ! ಮತ್ಸ್ಯ ಕೂರ್ಮ ವರಾಹಾದಿ ಪ್ರಾಣಶಕ್ತಿಯ ಅವತಾರಗಳನ್ನು ಕಲ್ಪಿಸಿರುವಲ್ಲಿ ಮಾನವೀ ಪ್ರಜ್ಞೆ ಅವಜ್ಞೆಯಾಗುತ್ತಿದೆ !

೨) ಇಂದಿನ ಈ ಸಂದಿಗ್ಧ ಪರಿಸ್ಥಿತಿಯ ಒಂದು ಮಹತ್ತ್ವದ ಕಾರಣವು : ಅಹೀಜಿತ್ ಬಿರುದಿನ ಇಂದ್ರ ಪ್ರತಿಮಾಭಂಜನದ ದುಷ್ಪರಿಣಾಮಗಳು.

ಈ ಅಂಶದ ಸ್ವಲ್ಪ ವಿವರಣವು ಈ ಮೊದಲು (ಬಿತ್ತಿದ್ದನ್ನು ಬೆಳಕೊ ಪುಟ ೧೨೫-೧೩೨) ಬಂದಿದೆ.

## IV

ಪ್ರಚಲಿತ ಋಗ್ವೇದಕ್ಕೆ ವೇದ (: ಜ್ಞಾನ) ಎಂದಿರುವ ಹೆಸರು ಒಂದು ಶುದ್ಧ ಮೋಸ. ಇಂದಿನದು ಅನಿಂದ್ರಿಯರ ವೇದ. 'ಅಸುತೃಪರ', ಅಸು =ಪ್ರಾಣೋಪಾಸಕರ ವೇದ. ಏಕೆಂದರೆ 'ಇಂದ್ರ' ನಿಗೆ ಅಗ್ರಪಟ್ಟವಿದೆ ಎಂಬ ಹಾಗಿನ ಸಂಭ್ರಮ ನಿರ್ಮಿಸುವ ಸಂಹಿತೆಯು ಇದಾಗಿದೆ. ವೇದದ ದೇವರ ಕಥೆಗಳನ್ನು ಬರೆದಿರುವ ಮ್ಯಾಕ್‌ಡೊನೆಲ್ಲನೇ ಈ ಬಗೆಯ ಸಂಭ್ರಮಕ್ಕೆ ಒಳಗಾಗಿದ್ದಾನೆ. "ಇಂದ್ರನೇ ಈ ವೇದದ ಪ್ರಧಾನ ದೈವತ'ಃ, ಇವನ ಸ್ತೋತ್ರಗಳ ಸಂಖ್ಯೆಯು ಇನ್ನುಳಿದ ಯಾವ ದೇವರಿಗಿಂತಲೂ ಹೆಚ್ಚು, ಇಂದ್ರನೇ ಭಾರತೀಯ ರಾಷ್ಟ್ರೀಯ ದೇವನಾಗಿದ್ದನು." ಈ ಬಗೆಯಾದ ಭಾವನೆಗೆ ಇಂಬುಗೊಡುವ ಈ ಸಂಹಿತೆಯು ಮೋಸ ತರುತ್ತಿದೆ.

**ಉದಾ:**

ಅ) ಪ್ರಚಲಿತ ಸಂಹಿತೆಯಲ್ಲಿ ಇಂದ್ರನ ತೇಜೋವಧೆಯಾಗಿದೆ. ಅಹೀಜಿತ್, ಅಹಿ ವೃತ್ರಹನ್ ಎಂಬ ಬಿರುದಿನ ಇಂದ್ರನು ಇರುವ ಈ ವೇದದಲ್ಲಿಯೇ 'ಅಹಿ ಬುಧ್ನ್ಯ' ಹೆಸರಿನ ಅಹಿ ಪೂಜೆಗೊಳ್ಳುತ್ತಿದೆ ! ಈ ವೇದದಲ್ಲಿಯೇ 'ಸರ್ಪರಾಜ್ಞೀ ಸೂರ್ಯೋಽವಾ' ಹೆಸರಿನ ದೇವತಾ ಸೂಕ್ತವಿದೆ.

ಆ) 'ಶಿಶ್ನೋ ದೇವಾಃ' 'ಸಂಪ್ರದಾಯದ ಶತ್ರು' ಎಂಬ ಈ ಇಂದ್ರನು, ಈ ವೇದದಲ್ಲಿ 'ಅಪಾಲಾ' ಎಂಬ ಕುಮಾರಿ, ತರುಣಿಯ ಗುಹ್ಯಾಂಗದ ರೋಗ ಪರಿಹಾರ ಮಾಡಿದನಂತೆ ! 'ಇಂದ್ರ' ಪಾತ್ರವು ಪ್ರಕಾಶ ತತ್ತ್ವದ ಸ್ವರ್ ಪಾತಳಿಯ ಮೇಲ ಇದು: ಇದು ಆ-ದರ್ಶ(Objective Reality)ಸ್ವರೂಪದ ಸಾಂಕೇತಿಕ ಪಾತ್ರ.

ಇಂದ್ರಮಿತ್ರ, ತ್ರಿತ ಆಪ್ತ್ಯನು ಒಬ್ಬ ಮಾನವ. ಈ ತ್ರಿತ ಆಪ್ತ್ಯನು ಅಹಿಃವೃತ್ರ ಹನನದಲ್ಲಿ ಇಂದ್ರನಿಗೆ ಸಹಕಾರಿ. ಇದರ ಅರ್ಥ ತ್ರಿತ ಆಪ್ತ್ಯನಂತಹರ ಮುಖಾಂತರ ವಾಗಿ ಇಂದ್ರನ ಕಾರ್ಯವು ಭೂಲೋಕದಲ್ಲಿ ಜರುಗುತ್ತದೆ, ಜರುಗಬೇಕು. ಆದರೆ ಪ್ರಕಾಶ ತತ್ತ್ವದ ಆದರ್ಶರೂಪ ಇಂದ್ರನು ಭೂಮಿಯ ಮೇಲೆ ಬಂದು ಯುವತಿ ಯರ ಗುಹ್ಯಾಂಗ ಪರೀಕ್ಷಿಸಿ ಔಷಧ ಲೇಪನ ಮಾಡುತ್ತಾನೆ, ಎಂಬ ಹಾಗಿನ ಈ ವರ್ಣನೆಯಲ್ಲಿ ಇಂದ್ರನ ಅಪಮೌಲ್ಯನವಾಗಿದೆ.

ಇ) 'ಅಂಭೃಣಿ' ಎಂಬ ಹದಿವಯದ ಹೆಣ್ಣು; ಮೈಯಲ್ಲಿ ಆವೇಶವಾಗಿ ಇವಳು 'ಆದಿಶಕ್ತಿ'ಯಾಗುತ್ತಾಳೆ. ಇವಳು ಹದಿನೆಂಟು; ತಾನು ರುದ್ರಿಯ ಮರುತರ ಸಂಗಾತಿ, ವಿಶ್ವೇದೇವರುಗಳ ಸಖಿ, ಆದಿತ್ಯರ ನಲ್ಲೆ, ಎಂದು ಸಾರುವ ಈ ಮಹಾದೇವಿಯು ಹೇಳುತ್ತಾಳೆ, ಇಂದ್ರನಿಗೆ ತಾನು ಭರ್ತೃವಾಗಿದ್ದೇನೆ; ನನ್ನಿಂದ ಅವನು ಪೋಷಿತನು! ಇಂತಹ ಇಂದ್ರನು ಭಾರತೀಯರ ರಾಷ್ಟ್ರೀಯ ದೇವರೋ ? ಇವನು ಅಹಿ : ನಾಗ : ಲಿಂಗನ ಶತ್ರುವೋ ? ಮಿತ್ರನೋ ?

ಈ) ಈ ವೇದದಲ್ಲಿ ಇಂದ್ರನ ಮಿತ್ರನು ಎಂಬ ವಿಷ್ಣುವು ಇಂದ್ರನ ಪ್ರಚ್ಛನ್ನ ಶತ್ರುವಾಗಿದ್ದಾನೆ. ಈ ಮೋಸವು 'ಉಪೇಂದ್ರ' ನೆಂಬ ವಿಷ್ಣುವು ಇಂದ್ರನಿಗಿಂತಲೂ ಈಗ ಶ್ರೇಷ್ಠನಾಗಿರುವಲ್ಲಿ ಬಯಲಿಗೆ ಬರುತ್ತಿದೆ.

ಉ) 'ಇಂದ್ರಾಯ ಸವಿತ್ರೇ ಅಹಿಘ್ನೇ' ಈ ಸರ್ಪಹಂತಕನು ಇಂದ್ರನು ಸವಿತೃ ದೇವನ ಪರ್ಯಾಯ ರೂಪನು. ಈ ಸವಿತೃ: ಸೂರ್ಯನನ್ನು 'ಸಾವಿತ್ರಿ' ಎಂಬ ಹೆಣ್ಣಿನ ರೂಪಕ್ಕೆ ತಿರುಗಿಸಿದ್ದಾಗಿದೆ. ಸವಿತೃನನ್ನು ಆದಿತ್ಯನೆಂದೂ ಉಪನಿಷತ್ತು ವರ್ಣಿಸಿದೆ.

ಕೇನೋಪನಿಷತ್ತಿನಲ್ಲಿ ಜಾತವೇದ ಅಗ್ನಿಯ ವಿಡಂಬನವು ಇದೆ. ಇಲ್ಲಿಯೇ ಇಂದ್ರನಿಗೆ ಉಮಾ ಹೈಮವತಿಯು ಜ್ಞಾನ ದೀಕ್ಷೆಯನ್ನಿತ್ತಳೆಂಬ ವರ್ಣನೆಯೂ ಇದೆ!

ಈ ಇಂದ್ರ ಪ್ರತಿಮಾ ಭಂಜನದ ಕೃತ್ಯವು ವೇದ ಕಾಲದಿಂದ ತೊಡಗಿ ಮಹಾ ಭಾರತ ರಾಮಾಯಣ ರಚನಾ ಕಾಲದವರೆಗೂ ಸತತವಾಗಿ ನಡೆದಿದೆ! ಇದರ ಅರ್ಥ, ಲೈಂಗಿಕ ಸ್ವೈರ ಆಚಾರಕ್ಕೆ ಆತಂಕಕಾರೀ ಮನೋಭಾವ ಸೂಚಕ= ಅಹಿ ಹಂತಕ ಇಂದ್ರನ ಸಂಪ್ರದಾಯವು ರಾಮಾಯಣ ಕಾಲದವರೆಗೂ ಹಿಮ್ಮೆಟ್ಟಲಿಲ್ಲ! ಭಗವತ್ ಗೀತೆಯಲ್ಲಿ ಇಂದ್ರಾಂಶನೆಂಬ ಅರ್ಜುನನ ಪಾತ್ರದ ನೆಪದಿಂದ ಇಂದ್ರ ಹನನದ ಪ್ರಯತ್ನವಾಗಿದೆ !

ಈ ಚಾಂದ್ರ (ನಾಗ : ಲಿಂಗ =ನಾಗ: ಚಂದ್ರ) ಸಂಪ್ರದಾಯವು ಭಕ್ತಿ ಮಾರ್ಗ ದಲ್ಲಿ ಸತಿ–ಪತಿ ಭಾವದ ವೇಷದಿಂದ ಪ್ರವೇಶ ಪಡೆದಿದೆ, ನಾಥಪಂಥೀಯ ಪ್ರಭಾವ ದಲ್ಲಿ ಸಾಮಾಜಿಕ ಬಂಧನಗಳನ್ನು ತೊರೆದು 'ಮುಕ್ತ ಸಂಗಿ' ಗಳಾಗಿ ಅಲೆವ ನಾಗಾ (ನಾಗ) ಸಂಪ್ರದಾಯವು ಭಾರತದಲ್ಲಿ ತನ್ನ ಪ್ರಭಾವ ಬೀರಿದ್ದುಂಟು.

ಮರಳಿ ಅಹಿಃಜಿತ್ ಇಂದ್ರನ =ಸೂರ್ಯನ ಆರಾಧನೆಯು ಪ್ರಾರಂಭವಾಗುವ ಯುಗವು ಈಗ ಸನ್ನಿಹಿತವಾಗಿದೆ.

## ಭಾಗ-೨

"ದೇವನ ಹೆಸರಿನಲ್ಲಿ 'ದೆವ್ವನ' ಪೂಜೆ ನಡೆದಿವೆ ಇಂದು ಎಲ್ಲೆಲ್ಲೂ, ಎಚ್ಚರ ! ಎಚ್ಚರ !"

ದ್ರಷ್ಟಾರನೆಂಬ ಖ್ಯಾತಿಯ ಡೆಕಾರ್ಟ ಹೇಳುವ ಅನುಭವದ ಮಾತು ಇದು. ದೇವನನ್ನು ಮರೆಮಾಚಿ ಕಪಟ ನಾಟಕ ಸೂತ್ರಧಾರಿ, ವಂಚಕ ಅನೃತ ಸ್ವರೂಪೀ ಮೃತ್ಯು ತತ್ತ್ವವು ಲೋಕದಲ್ಲಿ ಪೂಜ್ಯವಾಗಿದೆ ಎಚ್ಚರ !

ಈ ಭ್ರಷ್ಟಾಚಾರದ ಪ್ರೇರಣೆ ಇಂದಿನ ವೇದೋಪನಿಷತ್ತುಗಳಲ್ಲಿಯೇ ಹುದುಗಿದೆ ! ಋಗ್ವೇದ ಹಾಗೂ ಅವೆಸ್ತಾಗಳ ಭಾಷೆ ಸಮಾನವಿದೆ ಎಂದು ತಜ್ಞರೇ ಹೇಳುತ್ತಾರಷ್ಟೆ ? ಅವೆಸ್ತಾದಲ್ಲಿ 'ದೇವ' ಪದಕ್ಕೆ 'ದೆವ್ವ' (Daemon) ಎಂಬ ಅರ್ಥವಿದೆ ಫಾರ್ಶಿಗಳು 'ದೇವ'ನನ್ನು ಪೂಜಿಸುವದಿಲ್ಲ. ಭಾರತೀಯರಲ್ಲಿ ಈ ಎಚ್ಚರವು ಇನ್ನೂ ತಲೆಯೆತ್ತಿಲ್ಲ. ಇಂದಿನ ವೇದದಲ್ಲಿ 'ದೇವ' ಪದವು ಭ್ರಷ್ಟವಾಗಿದೆ.

## II

ಹೊಳೆ, ಪ್ರಕಾಶಿಸು ಎಂಬ ಅರ್ಥದ 'ಡಿವ್' ಆಖ್ಯಾತದಿಂದ ಸಾಧಿತ ಸಂಕೇತವು 'ದೇವ'. ಶಬ್ದಕೋಶದಲ್ಲಿ ದೊರೆವ ಅರ್ಥವು ಆಂತರಿಕ ಅನುಭವದ ಅಂಶವಾಗಿರಬೇಕು. ಮಾನವನಲ್ಲಿ ಹುಟ್ಟಿನಿಂದಲೂ ಕಾಣಿಸಿಕೊಳ್ಳುವ 'ಒಳ ತಿಳಿವಿನ ಬೆಳಕು' ಇದನ್ನು ಪುರಾತನರು 'ಜಾತ ವೇದ ಅಗ್ನಿ' (Intuition) ಎಂದು ಹೆಸರಿಸಿದ್ದಾರೆ. ಈ ಒಳ ಬೆಳಕು : ಅಗ್ನಿ : ಜಾತವೇದ ಜಾಗೃತವಿದ್ದಲ್ಲಿ ಸುತ್ತಮುತ್ತಲಿನ ಕತ್ತಲು ದೂರವಾಗುವ ಸಾಧ್ಯತೆಯು ಉಂಟು. ಒಳ ಬೆಳಕಿಗೆ ಮನು : ವೈವಸ್ವತ ಎಂಬ ಹೆಸರು ಉಂಟು.

ಭಾರತೀಯ ಪೂರ್ವ ಪರಂಪರೆಯುಲ್ಲಿ ಬಹು ಪ್ರಾಚೀನ ಕಾಲದಿಂದಲೇ 'ದೇವ' ಪದವು ಸಂದಿಗ್ಧ ಅರ್ಥದ್ದು ಆಗತೊಡಗಿದೆ. ಆದ ಕಾರಣ ಅಂದಿನವರು ನಿಸ್ಸಂದಿಗ್ಧ ಸ್ವರೂಪದ ಪರಿಭಾಷೆಯನ್ನು ರೂಢಿಸಿಕೊಂಡದ್ದು ಕಂಡುಬರುತ್ತದೆ. ಪ್ರಕಾಶ ತತ್ತ್ವದ ಸಾಕ್ಷಾತ್ಕಾರ ಮತ್ತು **ಜ್ಯೋತಿ** ಸ್ವರೂಪ ಸಾಕ್ಷಾತ್ಕಾರ ಇವೆರಡರಲ್ಲಿ ಹಗಲು-ಇರುಳಿನಷ್ಟು ಅಂತರವಿದೆ. ಬಾಳಿನಲ್ಲಿ ಅಂತಃಸಂಗತಿಯುಕ್ತ ಅರ್ಥಃ ವಿಚಾರವು. ತತ್ವತಃ ಪ್ರಕಾಶರೂಪ. ಜೀವನದೊಳಗಿನ ಸಂದೇಹರೂಪ ಕತ್ತಲನ್ನು ತೊಲಗಿಸಬಲ್ಲ ಅರ್ಥಃವಿಚಾರ ತತ್ತ್ವವು ಪ್ರಕಾಶವಲ್ಲದೆ ಮತ್ತೇನು ? ಈ ಅರ್ಥಃ ವಿಚಾರ ಮಾನವ ಕಲ್ಪಿತವಲ್ಲ. ಬಾಳಿನಲ್ಲಿ ಈ ಅರ್ಥಃವಿಚಾರವು ಹಾಸು-ಹೊಕ್ಕಿನಂತಿದೆ. ತನ್ನೊಳಗಿನ ಜಾತವೇದ ಅಗ್ನಿ: ಪ್ರಜ್ಞೆಯ ಮೂಲಕ ಬಾಳಿನೊಳಗಿನ ಅರ್ಥಃವಿಚಾರವನ್ನು ಸಹಜವಾಗಿ ಗ್ರಹಿಸಿಕೊಳ್ಳಬಲ್ಲ ಸೂಕ್ಷ್ಮ ಸಂವೇದನಾ ಕ್ಷಮತೆಯು ಅತ್ಯಂತ ಅಸಾಧಾರಣವಾಗಿದ್ದಿತೆಂದು ಡೆಕಾರ್ಟ, ಐನ್ಸಟನ್‌ರಂತಹ ವಿಖ್ಯಾತ ಸಂಶೋಧಕರ ಜೀವನ ಚರಿತ್ರಗಳಿಂದ ಖಚಿತಪಡುತ್ತದೆ.

ಆಧುನಿಕ ಉಪಕರಣಗಳ ನೆರವು ಇಲ್ಲದೆಯೂ ಪುರಾತನರು ಈ ಜೀವನ-ವಿಶ್ವಕ್ಕೆ, ಆಧಾರಭೂತವಿರುವ ಸನಾತನ ತತ್ತ್ವವನ್ನು "ಋತ ಸ್ವರೂಪೀ ಸತ್ಯ" ಎಂದು ಹೆಸರಿಸಿದ್ದುಂಟು ! 'ಧರ್ಮ' ಸಂಕೇತದ ಮೂಲ ಅರ್ಥವು 'ಲೋಕವನ್ನು ಧಾರಣ ಮಾಡುವ' ಸಂರಕ್ಷಿಸುವ 'ನಿಯಮ' ಎಂದೇ ಇದೆ. "ಧಾರಣಾತ್ ಧರ್ಮಂ ಇತಿಹು !"

'ಧರ್ಮ' ಈ ಸಂಕೇತವು ಋತಃ ಸತ್ಯಕ್ಕಿಂತ ಅರ್ವಾಚೀನ ! 'ಋತ'-(ವಿಶ್ವ ನಿಯಮ)ವನ್ನು ಪಾಲಿಸುವದು ಎಂದರೆ ಧರ್ಮವನ್ನು ಆಚರಿಸುವದು. ಆದರೆ 'ಋತ' ಸಂಕೇತವನ್ನು ಕಡೆಗಣಿಸಿ ಅದರ ಬದಲಾಗಿ 'ವ್ರತ' ಎಂಬ ಹೊಸ ಪರಿಭಾಷೆಯು ತಲೆಯೆತ್ತಿದ್ದನ್ನು ವೇದದಲ್ಲಿಯೇ ಕಾಣಬಹುದಾಗಿದೆ.

## III

ಆದಿತ್ಯರನ್ನು 'ಧೃತವ್ರತಾಃ' ಎಂದು ವರ್ಣಿಸಿದ್ದಾಗಿದೆ. 'ನಾಲಗೆಯು ಕುಲವ ನರಹುವುದು' ಎಂಬ ರಾಘವಾಂಕನ ಸೂತ್ರದಿಂದ ಭಾರತೀಯ ಸಂಸ್ಕೃತಿಯಲ್ಲಿ ಋತಃ ಸತ್ಯದ ಮಾನವ ಧರ್ಮವು ಹಿಮ್ಮೆಟ್ಟಿ ವ್ರತಾಚರಣ ರೂಪ ನರ(ಳೆ)ರ ಸಂಪ್ರದಾಯವು 'ಆದಿತ್ಯ' ಸಂಪ್ರದಾಯದೊಡನೆ ಶಿಷ್ಟಮಾನ್ಯವಾಗತೊಡಗಿತು, ಎಂಬ ಐತಿಹ್ಯವು ಇಲ್ಲಿ ಬಯಲಿಗೆ ಬರುತ್ತದೆ. ಪುರಾತನ ದೇವರುಗಳಲ್ಲಿ ಸಾಮ್ರಾಟ್ ವರುಣನಷ್ಟು ಪುರಾತನ ದೇವರು ಬೇರೊಂದಿಲ್ಲ, ಎಂದು ತಜ್ಞರಿಗೆ ಕಂಡು ಬಂದಿದೆ. 'ಋತಃ ಸತ್ಯದ ಸಂರಕ್ಷಕ ವರುಣನು' ಎಂಬುದು ಹಿಂದೊಮ್ಮೆ ಸರ್ವ ಮಾನ್ಯವಿತ್ತು. 'ಸತ್ಯಾನ್ನಾಸ್ತಿ ಪರೋ ಧರ್ಮಃ' ಸತ್ಯವನ್ನು ಆಚರಿಸುವದಕ್ಕಿಂತಲೂ ಮಿಗಿಲಾದ ಧರ್ಮವು ಬೇರೊಂದಿಲ್ಲ. 'ದೇವ' ಎಂಬುವನು 'ಋತ: ಸತ್ಯದ ಸಂರಕ್ಷಕನು'-ಈ ಸೂತ್ರದಂತೆ 'ಋತ: ಸತ್ಯವು ದೇವರಿಗಿಂತಲೂ ಮಿಗಿಲಾಯಿತು, ಶ್ರೇಷ್ಠವಾಯಿತು. **ಋತದ-ವಿಶ್ವನಿಯಮದ-ಸಂರಕ್ಷಕನೆಂಬ ಕಾರಣದಿಂದ ಅವನಿಗೆ ದೇವತ್ವವು ಪ್ರಾಪ್ತವಾಗುತ್ತದೆ.** ಆದಕಾರಣ ನಿಯತಿಕೃತ ನಿಯಮರಹಿತ 'ಸ್ವಯಂಭೂ' ಎಂಬ ಸರ್ವಾಧಿಕಾರೀ ಸ್ವರೂಪದ ಸ್ವೇಚ್ಛಾಚಾರಿಯಾದ ಅಸುರ ದೈತ್ಯ ಶಕ್ತಿಯನ್ನು ದೇವರೆಂದು ಪೂಜಿಸುವ ಪಾಡೀಯು ಆ ಜನಗಣದ ಅವನತಿಗೆ ವಿನಾಶಕ್ಕೆ ಕಾರಣವಾಗಬೇಕಷ್ಟೆ ?

ದೇವರುಗಳ ಇತಿಹಾಸದಲ್ಲಿ ಈ ದೇವತೆಗಳಲ್ಲಿ ಎರಡು ಬಗೆಯ ಪ್ರವೃತ್ತಿಗಳು ಕಂಡುಬರುತ್ತವೆ. ಅರ್ಥವಿಚಾರಕ್ಕೆ ಬಹುಮಟ್ಟಿಗೆ ಎಟುಕಬಲ್ಲ ಪ್ರಕಾಶ ತತ್ತ್ವದ ದೇವರುಗಳಿಗಿಂತಲೂ, ಅ-ಗಮ್ಯ-ಗೂಢ, ಗುಹ್ಯ ಸ್ವರೂಪ ಕತ್ತಲಿನಿಂದ ಆವೃತ, ಪವಾಡ ಚಮತ್ಕಾರ ಸ್ವರೂಪ ದೇವರ ಆಕರ್ಷಣವು ಹಲವರಿಗೆ ! ಪ್ರಕಾಶ ತತ್ತ್ವಕ್ಕೆ ಬದಲಾಗಿ ಜ್ಯೋತಿ ಸ್ವರೂಪ ದೇವರ ಆರಾಧಕರು ಇವರು.

'ಸೂರ್ಯೋ ಜ್ಯೋತಿಃ' ಎಂಬ ಈ ಅಂತರ್ವಿಸಂಗತ ಅರ್ಥದ ಸಾಂಕೇತಿಕ ಪ್ರತಿಮೆಯು ಇಂದಿನ ಋಗ್ವೇದದಲ್ಲಿದೆ. ಸೂರ್ಯನ ಬದಲು ಸೂರ್ಯ-ನಾರಾಯಣನ-ಅಗ್ನಿ

ನಾರಾಯಣನ–ನಚಿಕೇತ ಅಗ್ನಿಯ ಆರಾಧಕರಲ್ಲಿ **ಸೂರ್ಯನಲ್ಲಿಯೇ ತನ್ನ ಜ್ಯೋತಿರ್ಲಿಂಗದ ದರ್ಶನ ಪಡೆವ ಪರಂಪರೆ ತಲೆಯೆತ್ತಿತು !** ನಿಯತಿಕೃತ ನಿಯಮಗಳನ್ನು ಲೆಕ್ಕಿಸದ ಈ ಅಮಂಗಳ ಸಂಪ್ರದಾಯಗಳು ಬಾಳಿನಲ್ಲಿ ನಿಯಮ : ವ್ಯವಸ್ಥೆ ಎಂಬುದು ಇಲ್ಲವೇ ಇಲ್ಲ ಎಂದು ಸಾರುತ್ತ ಬಂದಿದೆ.

## IV

ಆದರೆ ಈ ಜೀವನವು ವಿಶ್ವನಿಯಮಕ್ಕೆ ಆಧೀನವಿದೆ. ಬಾಳಿನಲ್ಲಿ ನಿಯಮ: ವ್ಯವಸ್ಥೆಯು ಉಂಟು ಎಂಬುದನ್ನು ಮನಗಾಣಿಸಿ ಕೊಡುವ ಒಂದು ಅಮೋಘ ಸೂತ್ರವು ಹೇಗಿದೆ, ವಿಮರ್ಶಿಸಿ ನೋಡಿಕೊಳ್ಳಿ.

'ಇತಿಹಾಸ, ಕಾಲತತ್ತ್ವ, ಮತ್ತು ದೇವತಾ ಸ್ವರೂಪ' ಈ ಮೂರರಲ್ಲಿರುವ ಅನ್ಯೋನ್ಯವೇ ಸಾಕ್ಷಿ. ಈ ಬಾಳಿನೊಳಗಿನ ಅಂತಃಸಂಗತಿಗೆ ಸುಸಂಬದ್ಧತೆಗೆ ಮಾನವ ಪ್ರಾದುರ್ಭಾವಕ್ಕೂ ಮುಂಚೆ ಭಾಷೆಯೇ ಇಲ್ಲದಂದು, ಎಲ್ಲೆಲ್ಲೂ ಕಗ್ಗತ್ತಲೆ ಕವಿದಿತ್ತು. ಭಾಷೆ ಮೈದೋರಿದ ಹಾಗೆ ಈ ಕತ್ತಲು ದೂರ ಸರಿಯತೊಡಗಿತು. ಮಾನವನ ಒಳ ಹೊರಗಣ ಕತ್ತಲನ್ನು ತೊಲಗಿಸಲು ಸಾಧನವಾದ ಈ ಮಾಧ್ಯಮವನ್ನು 'ಭಾಷೆ' ಎಂದು ಹೆಸರಿಸುವಲ್ಲಿ ಅಂದಿನವರೆಗೆ ಬಂದ ಬೆಳಕಿನ ಅನುಭವವು 'ಭಾಷೆ' ಈ ಸಂಕೇತದಲ್ಲಿ ಒಡಮೂಡಿ ನಿಂತಿದೆ. ಕತ್ತಲನ್ನು ತೊಲಗಿಸುವ ಕಾರಣವಿರುವ ಈ ಭಾಷೆಯನ್ನು ರೂಪಿಸಿದ ಅಂದಿನ **ಮಾನವನೂ ಪ್ರಕಾಶ ತತ್ತ್ವದ** ಪ್ರತಿನಿಧಿ ಇರಬೇಡವೆ ?

ಭಾಷೆಯು ಇತಿಹಾಸದ ಕಕ್ಷೆಗೆ ಒಳಗಾಗಿದೆ. ಭಾಷೆಯಂತೆ ಇತಿಹಾಸವು ಆಕಾರ ಪಡೆಯಲಿಕ್ಕೂ ಈ ಮಾನವನೇ ನಿಮಿತ್ತ ಕಾರಣನು.ಭಾಷೆ, ಇತಿಹಾಸಕ್ಕೆ ಕಾರಣನಾದ ಈ ಮಾನವನು ಕಾಲತತ್ತ್ವದ ಕೈಯಾಳು–ಕಾಲಾಳು ! ಪುರಾತನರ ಪರಿಭಾಷೆಯಲ್ಲಿ ಹೇಳಬಹುದಾದರೆ ಮಾನವನು ಕಾಲತತ್ತ್ವದ ಕೂಸು. ತನ್ನ ಒಳ ಹೊರಗಣ ಕತ್ತಲನ್ನು ಓಡಿಸಬಲ್ಲ ಭಾಷೆಯನ್ನು ರೂಪಿಸಿರುವ ಮಾನವನನ್ನು ಮನು> ಮಾನವನನ್ನು ವೈವಸ್ವತ : ವಿವಸ್ವತನ ಅಂಶ ಅಥವಾ ಸಂತಾನ ಎಂದುದರೊಳಗಿನ ಅಂತಃಸಂಗತಿಯು ಮನೋಜ್ಞವಾಗಿದೆ.

ಇತಿಹಾಸ ಮತ್ತು ಇದನ್ನು ರೂಪಿಸಿರುವ ಕಾಲತತ್ತ್ವ ಹಾಗೂ ಈ ಕಾಲತತ್ತ್ವದ ಪ್ರೇರಕ ಶಕ್ತಿಯಾದ ದೇವತಾಸ್ವರೂಪ ಈ ಮೂರರಲ್ಲಿ ಅನ್ಯೋನ್ಯವಿರುತ್ತದೆ ಎಂಬ ಈ ಸೂತ್ರವು ಸಾಧುವಾಗಿದೆ ಎಂಬುದು ಮೇಲಣ ವಿವರದಲ್ಲಿ ಹೊರವಡುತ್ತದೆ.

## V

ಈ ಪ್ರಪಂಚದಲ್ಲಿ ಪ್ರಾಣಿ ಪಶುಗಳನ್ನು ಪ್ರೇರಿಸುವ ಕಾಲತತ್ತ್ವವಿದೆ. ಈ ಕಾಲತತ್ತ್ವದ ಮೂಲಕ ಇತಿಹಾಸಕ್ಕೆ ಪ್ರಾಪ್ತವಾಗುವ ಆಕಾರ ಮತ್ತು ಮಾನವರನ್ನು ಪ್ರೇರಿಸುವ ಕಾಲತತ್ತ್ವದ ಮೂಲಕ ಇತಿಹಾಸಕ್ಕೆ ಪ್ರಾಪ್ತವಾಗುವ ಆಕಾರ

ಇವೆರಡೂ ತೀರ ಭಿನ್ನ ಸ್ವರೂಪವನ್ನೂ, ವಿಭಿನ್ನ ಪಾತಳಿಯ ಮೇಲಣವೂ ಇರುತ್ತವೆ.

ಪ್ರಸ್ತುತ 'ಕಾಲತತ್ತ್ವ' ಎಂದರೆ ಯಾವುದು ? ಇದರ ಸ್ಥೂಲ ಲಕ್ಷಣವೇನು? ಎಂಬುದರ ಸ್ಪಷ್ಟತೆಯು ಅವಶ್ಯವಾಗುತ್ತದೆ.

ಕಾಲತತ್ತ್ವ ಎಂದರೆ ಶುಭ್ರ, ಪ್ರಕಾಶರೂಪ, ನಿನ್ನೆ–ಇಂದು–ನಾಳೆಗಳ ಸ್ವರೂಪದ ವಿಭಾಗತ್ರಯದ ಈ ಗತಿಗೆ ಕಾರಣವಿರುವ ಆಕಾಶ ತತ್ತ್ವದ 'ಪ್ರಕಾಶ' ಎನ್ನುವ ವಾಡಿಕೆಯು ಇದ್ದುದನ್ನು ಈ ಮೊದಲು ಹೇಳಿಯಾಗಿದೆ. ಇದಕ್ಕೆ ಹೊರ ತಾದ ಇನ್ನೂ ಒಂದು ಬಗೆಯ ಕಾಲತತ್ತ್ವವು ಉಂಟೆ ? ಇದ್ದರೆ ಅದರ ಲಕ್ಷಣ ಗಳೇನು ಎಂಬ ಪ್ರಶ್ನೆಯ ಪರಿಹಾರವು ಈಗ ಅವಶ್ಯವಾಗುತ್ತದೆ.

ಇಲ್ಲಿ ಒಂದು ಸಂದಿಗ್ಧ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ ಗತ್ಯರ್ಥಕ 'ಕಲ್' ಆಖ್ಯಾತ ಸಾಧಿತವೆಂಬ **ಚಲನ-ಸಂಚಲನ** ಸೂಚಕ ಕಾಲವು ಗತಿಯುಕ್ತ ಇರುವದು ನಿಜವಿದೆ. ಆದರೆ ಏನೆಲ್ಲ ಗತಿಗಳನ್ನು 'ಕಾಲ' ತತ್ತ್ವದ ಚಲನ ಎನ್ನ ಲಾದೀತೆ ? ಉದಾ : ನೀರಿನ ಪ್ರವಾಹದ ಗತಿಯನ್ನು 'ಕಾಲ' ಎನ್ನಬಹುದೆ ? ಈ ಗತಿಯ ವೇಗವನ್ನು ಕಾಲಮಾಪನದಿಂದ ನಿರ್ದಿಷ್ಟಪಡಿಸಿ ಅರಿಯಬಹುದಾಗಿದೆ. ಜಲ ಪ್ರವಾಹದ ಗತಿಯನ್ನು 'ಕಾಲ' ಎನ್ನಲು ಬರಲಾರದು. ಪ್ರಸ್ತುತ ಸಂದಿಗ್ಧ ಸಮ ಸ್ಯೆಯು ಜಲಪ್ರವಾಹಕ್ಕೆ ಸಂಬಂಧಿಸಿದ್ದಲ್ಲವಾದರೂ ಸ್ಥಲದ ಗತಿಗೆ ಸಂಬಂಧಿಸಿದ್ದಾ ಗಿದೆ. ಸ್ಥಲ(ದೇಹ)ದ ಗತಿಯನ್ನು ಆಯುರ್ಮಾನವನ್ನು–ಉಸಿರಾಡಿಸುವ ಅವಧಿ ಯನ್ನು 'ಕಾಲ' ಎನ್ನುವ ಅಸಮಂಜಸ ರೂಢಿಯಿಂದಾಗಿ ಮಾನವ ಜೀವನದ ಯಥಾರ್ಥ ಸ್ವರೂಪವನ್ನು ಗ್ರಹಿಸಿಕೊಳ್ಳುವದು ದುಸ್ತರವಾಗಿದೆ.

## VI

ಸಮಂಜಸ ಕಾಲಗತಿ ಮತ್ತು ಅಸಮಂಜಸ ಕಾಲಗತಿ ಇವೆರಡನ್ನೂ ಇವುಗಳ ಲಕ್ಷಣಗಳಿಂದ ವಿಂಗಡಿಸಿ ಅರಿಯಬಹುದಾಗಿದೆ.

೧ ಸಾಮಾಜಿಕ ಸ್ವರೂಪದ (ಸಮೂಹದ್ದಲ್ಲ) ಅಥವಾ ಸಾಮಾಜಿಕ ಸಮ ಷ್ಟಿಯ ಸಂದರ್ಭದ ಬಾಳನ್ನು ಎಂದರೆ ಜೀವನವನ್ನು ಅರಿಕೆಯ ಅಳವಿನಲ್ಲಿ ತಂದು ಕೊಡುವ ಪ್ರಕಾಶ ತತ್ತ್ವದ ಸಂತತವಾಗಿ, ಆಗಾಮೀ ನಾಳೆಗಳತ್ತ ಸಾಗಿರುವ ನಿನ್ನೆ–ಇಂದು ಸ್ವರೂಪ ವಿಭಾಗತ್ರಯದ ಈ ಗತಿಯನ್ನು ಸಮಂಜಸ ಕಾಲ ಎನ್ನಬಹುದು. ಸಮಾಜ ಸಮಷ್ಟಿಗೆ ಇತಿಹಾಸವಿದೆ ; ವ್ಯಕ್ತಿಗೆ ಮಂದಿಗೆ–ಸಮುದಾಯಕ್ಕೆ (crowd, mass) ಇತಿಹಾಸವಿಲ್ಲ, ಸಮಾಜ : ಸಮಷ್ಟಿಯ ಜೀವನ ಸಂದರ್ಭದ ಈ ಕಾಲ ತತ್ತ್ವವು 'ಸ್ವಯಂ ವೇದ್ಯ'ವಾಗಿದೆ. ಏಕೆಂದರೆ ಇದು ಪ್ರಜ್ಞಾ: ಮನಸ್‌ತತ್ತ್ವದ ಪ್ರಚೋದನೆಯ ಗತಿಯಾಗಿರುತ್ತದೆ. ತತ್ತ್ವಜ್ಞ ಕಾಂಟನ ಪರಿಭಾಷೆಯಲ್ಲಿ ಇದು 'Noumena' ದ ಗತಿ, 'Phenomena' ದ ಗತಿಯಲ್ಲ ! Historical knowledge is possible, because its objects are noume–

nal. (not phenomenal). ಪುರಾತನ ಗ್ರೀಕ ಪರಿಭಾಷೆಯ Nous : Mind ಮತ್ತು ಭಾರತೀಯ ಪ್ರಜ್ಞಾ: ಮನಸ್ಸು ಇವು ಸಮಾನಾರ್ಥಕವಾಗಿವೆ.

## VII

ಜೀವನದ (ಮಾನವನ) ಪಾತಳಿಯು ಜೀವಿತದ (ವ್ಯಕ್ತಿ : ನರನ) ಪಾತಳಿಯ ಹಂತಕ್ಕೆ ಬಂದಂದಿನಿಂದ ಈ **ಬಾಳಿನಲ್ಲಿಅಸಮಂಜಸ ಕಾಲಗತಿಗೆ ಬೆಲೆ ಬಂತು. ಸಮಂಜಸ ಕಾಲಗತಿಯು ತನ್ನ ಬೆಲೆಗೆ ಎರವಾಯ್ತು !**

ಜೀವಿತದ ಪಾತಳಿಯನ್ನು ರೂಪಿಸುವ, ಪ್ರೇರಿಸುವ ಕಾಲಗತಿಯನ್ನು 'ಅ-ಸಮಂಜಸ' ಎನ್ನಲು ಕಾರಣಗಳಿವೆ. ೧) ಇದು ನಿಜವಾಗಿ ಕಾಲಗತಿಯೇ ಅಲ್ಲ; ಇದು ಪ್ರಕಾಶರೂಪ-ಪ್ರಕಾಶದಾಯಕ ಸ್ವಯಂವೇದ್ಯ ಕಾಲಗತಿಯಲ್ಲ. ೨) ಇದು ಸ್ಥಲಕ್ಕೆ ಬದ್ಧ ಸ್ಥಲದ ಅಂಗವೇ ಆಗಿರುವ ಗತಿ ! ಸ್ಥಲದ ಈ ಗತಿಯು ಸ್ವಯಂ ಪ್ರಕಾಶ ಯುಕ್ತವಲ್ಲ. ಆದಕಾರಣ ಇದು ಅ-ಸ್ವಯಂವೇದ್ಯ ಕಾಲಗತಿ. ೩) ಇನ್ನೊಂದು ಮಹತ್ತ್ವದ ಭೇದವಿದೆ. ಪ್ರಕಾಶ ತತ್ತ್ವದ ನಿನ್ನೆ-ಇಂದು-ನಾಳೆಗಳು ವೈಯಕ್ತಿಕ ಸ್ವರೂಪದವು ಅಲ್ಲ. ಆದರೆ ಸ್ಥಲಕ್ಕೆ (ದೇಹ) ಬದ್ಧ ದೇಹದ ಅಂಗವೇ ಆಗಿರುವ ಈ ಕಾಲಗತಿಯು ವೈಯಕ್ತಿಕ ಸ್ವರೂಪದ್ದು ಆಗಿದೆ ! 'ಹೆಣ್ಣಿನ ಕಾಲ' ಮತ್ತು 'ಗಂಡಿನ ಕಾಲ' ವಿಭಿನ್ನವಿರುವದೂ ಉಂಟು ! ೪) ಪ್ರಕಾಶಯುಕ್ತ ಕಾಲವು ಮಾನವನೊಳಗಿನ ಪ್ರಜ್ಞಾ : ಮನಸ್ ಶಕ್ತಿಗೆ ಸಂಬಂಧಿಸಿದ್ದು, ಪ್ರಜ್ಞಾ ; ಮನಸ್ಸಿನಲ್ಲಿ ಪ್ರೇರಿಸುವದೂ ಆಗಿದೆ. ಆದರೆ ಕತ್ತಲಿನಿಂದ ಆವೃತ ಸ್ಥಲದ ಅಂಗವಾದ ಅ-ಸ್ವಯಂವೇದ್ಯವಾದ ಕಾಲವು, ಪಕ್ಕನೆ ಲೈಂಗಿಕ ಪ್ರೇರಣೆಯಾಗಿ ಪರಿಣಮಿಸುವದೂ ಉಂಟು. ೫) ಜನನಕ್ಕೆ (ಆದಕಾರಣ ಮರಣಕ್ಕೂ) ಕಾರಣವಿರುವ ಈ ಕಾಲವು ಕತ್ತಲಿನಿಂದ ಆವೃತ ವೃತ್ತಾಕೃತಿಯದೇ [O] ಆಗುವದುಂಟು. (ಸಂ)ಭವ ಚಕ್ರ=ಕಾಲ (ಮೃತ್ಯು) ಚಕ್ರಕ್ಕೆ ಕಾರಣವಿರುವ ಕಾಲಶಕ್ತಿಯು ಮೃತ್ಯು ದೈವತ ಎಂದು ಗೀತೆಯೇ ಹೇಳಿದೆ. ಆಂತರಿಕ ಆಶಯ : ಗುಣವೇ ಬಾಹ್ಯ ಆಕೃತಿಗೆ ಕಾರಣವಿರುತ್ತದೆ ಎಂದು ಅರಿಸ್ಟಾಟ್ಲ, ಕಾಲಿದಾಸಾದಿಗಳು ಎಂದೋ ಹೇಳಿದ್ದಾರೆ. ಈ ಸೂತ್ರದ ಮೇರೆಗೆ ಶೂನ್ಯ [O] ಆಕೃತಿಯನ್ನು ಪ್ರೇರಿಸುವ ಕಾಮನೆಗಳು ಒಟ್ಟಿನಲ್ಲಿ ಅರ್ಥಶೂನ್ಯ-ಶೂನ್ಯ ಅರ್ಥದವೇ ಇರುತ್ತವೆ ಎಂದು ಹೇಳಿದರೆ ತಪ್ಪಲ್ಲವಷ್ಟೆ ?

ಇದರ ಅರ್ಥ ವೃತ್ತಾಕೃತಿ[O] ಪ್ರೇರಕ ಕಾಲತತ್ತ್ವವು ನಿಜವಾದ ಕಾಲತತ್ತ್ವ ಅಲ್ಲವೇ ಅಲ್ಲ. ಈ ಕೃಷ್ಣ : ಕಾಲಶಕ್ತಿಯು

ಕಾಲಃ ಅಸ್ಮಿ ಲೋಕ ಕ್ಷಯಕೃತ್ ಪ್ರವೃದ್ಧಃ
ಲೋಕಾನ್ ಸಮಾಹರ್ತುಂ ಇಹ ಪ್ರವೃತ್ತಃ

ಲೋಕಕ್ಷಯಕ್ಕಾಗಿಯೇ ನಿಗುರಿನಿಂತಿರುವ (ಪ್ರವೃದ್ಧಃ) ಕಾಲನು ನಾನು ; ಲೋಕ ಸಂಹಾರವೇ ನನ್ನ ಈ ಅವತಾರದ ಉದ್ದೇಶವಾಗಿದೆ. 'ಮೃತ್ಯು ತತ್ತ್ವ ಎಂದರೆ ಕತ್ತಲು ! ಅಭಾವವೇ ಸ್ಥಾಯಿ ಆಗುತ್ತದೆ. ಆದಕಾರಣ ಇದನ್ನು ಪುರಾತನರು ಅನೃತ ದೇವರು=ನಿರ್‌ಋತಿ: ದೈವ, ದೈತ್ಯ ಶಕ್ತಿ ಎಂದಿರುವದು ನಿಷ್ಕಾರಣವಲ್ಲ.

ಈ ಹಿನ್ನೆಲೆಯಲ್ಲಿ ಖಚಿತಪಡುತ್ತಿರುವ ಬಾಳಿನ ಇತಿಹಾಸದ ಆಕೃತಿ ಮತ್ತು ಬಾಳನ್ನು ರೂಪಿಸುವ, ಪ್ರೇರಿಸುವ ಕಾಲತತ್ತ್ವ ಮತ್ತು ಈ ಕಾಲತತ್ತ್ವ ಪ್ರಚೋದಕ ದೇವತಾ ಸ್ವರೂಪ ಈ ಮೂರರಲ್ಲಿ ಇರುವ ಅನ್ಯೋನ್ಯವು ತುಂಬ ಉನ್ಬೋದಕವಾಗಿದೆ.

೧) ನಿನ್ನೆ–ಇಂದು–ನಾಳೆಗಳ ರೂಪದ ಪ್ರಕಾಶ ಸ್ವರೂಪ ವಿಭಾಗತ್ರಯದ ಗತಿಯನ್ನು ಪ್ರಜ್ಞಾಯುಕ್ತ ಮನಸ್ ಅಥವಾ ವೈವಸ್ವತ ಮನುವು = ಜಾತವೇದ ಅಗ್ನಿಯು ಪ್ರೇರಿಸುತ್ತಿರುವಂತೆ ;

೨) ಆಗಾಮೀ ನಾಳೆಗಳೇ ಇಲ್ಲದ ಕತ್ತಲಿನಿಂದ ಆವೃತ್ತ ವೃತ್ತಾಕೃತಿಯ ಗತಿಯನ್ನು ಪ್ರಾಣಚೇತಸ ಶಕ್ತಿ ಅಥವಾ ಲೈಂಗಿಕ ಪ್ರಚೋದಿಸುತ್ತದೆ.

ಮೊದಲನೆಯ ಬಗೆಯ ಗತಿಯಿಂದಾಗಿ ಆಕಾರ ಪಡೆದ ಇತಿಹಾಸವು ಪ್ರ-ಗತಿ-ಪರವೇ ಇರಬಲ್ಲದು. ಎರಡನೆಯ ಬಗೆಯ ಗತಿಯಿಂದಾಗಿ ಆಕಾರ ಪಡೆವ ಇತಿಹಾಸವು ಕಾಲಸ್ತಂಭವನ್ನು ಸುತ್ತುವ ವೃತ್ತಾಕೃತಿಯದೇ ಆಗುವ ಅನಿವಾರ್ಯತೆಯು ಇದೆ. **‘All History is Contemporary History’** = ಸನಾತನ ಇತಿಹಾಸವಿದು **‘Time is moving eternity’** ಎಂದರೇನೇ ಇದು.

---

# ಬುದ್ಧಿ ಮತ್ತು ಪ್ರಜ್ಞೆ : ಒಂದು ಭಾಷಿಕ ಅಧ್ಯಯನ

ಮಲ್ಲೇಪುರಂ ಜಿ. ವೆಂಕಟೇಶ

**'ಪ್ರಜ್ಞೋಪಜ್ಞಂ ತಯೋಃ ಆದ್ಯಂ'**

ಭಾಷಿಕ ಅಧ್ಯಯನವೆಂದರೆ : ಆಯಾ ಭಾಷಿಕರ ಜೀವಿತ ಮತ್ತು ಜೀವನ ವಿಧಾನದ ಪರಿಶೀಲನೆ ಎಂದೇ ಅರ್ಥ. ಭಾಷಿಕ ವಿವರಣೆಯಲ್ಲಿ ಸಾಂಸ್ಕೃತಿಕ ವಿವರಗಳು ಆಯಾ ಕಾಲದ ಸಾಂಸ್ಕೃತಿಕ ಪಾರಿಭಾಷಿಕ ಪದಗಳಲ್ಲಿ ಅಡಕಗೊಂಡಿರುತ್ತದೆ. ಈ ಅಂಶವು ಸಮಾಜೋಸಾಂಸ್ಕೃತಿಕ ಅಧ್ಯಯನ ಮಾಡಿರುವವರಿಗೆಲ್ಲ ತಿಳಿದಿರುವ ಸಂಗತಿಯೇ ಆಗಿದೆ. ಈ ಅಂಶವು ಯಾವುದೊಂದೇ ಭಾಷೆಗೇ ಸಂಬಂಧಿಸಿದ್ದಲ್ಲ. ಒಂದು ಭಾಷೆಯೇನು ಹಲವು ಭಾಷೆಯ ತಳಗಡೆಯಲ್ಲಿ ಅನೇಕ ಅಂತಃಸಂಗತಿಯುಕ್ತ ಸಾಹಚರ್ಯೆಯು ಇರುತ್ತದೆಂಬುದನ್ನು ಬಗೆಬಗೆಯಿಂದ ಅಧ್ಯಯನ ಮಾಡಿರುವ ತೌಲನಿಕ ಭಾಷಾವಿಜ್ಞಾನಿಗಳೂ ಸಾಂಸ್ಕೃತಿಕ ಮನಃಶಾಸ್ತ್ರವನ್ನು ಅಧ್ಯಯನ ಮಾಡಿರುವವರೂ ಈಗ ಸ್ಪಷ್ಟಪಡಿಸುತ್ತ ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಯಾವುದೇ ಸಂಸ್ಕೃತಿಯ ವಿವರಗಳನ್ನು, ಅದರ ತಾತ್ತ್ವಿಕ ಸಂಬಂಧಗಳನ್ನು ಪರಿಶೀಲಿಸಲು ಮೊತ್ತಮೊದಲಾಗಿ ಮಾಧ್ಯಮವಾಗಿ ಬಳಸುವುದು ಭಾಷೆಯನ್ನೇ. ಇದನ್ನು ಮತ್ತಷ್ಟು ವಿವರವಾಗಿ ಪ್ರಸ್ತಾಪಿಸುವುದಾದರೆ ಭಾಷೆ : ಸಂಸ್ಕೃತಿ : ಮತ್ತು ಧರ್ಮ ಇವುಗಳಲ್ಲಿ ಒಂದಕ್ಕೊಂದು ಅವಿನಾಭಾವವಾದ ಸಂಬಂಧ ಉಂಟೇ ಉಂಟು.

ಕನ್ನಡದ ಮಟ್ಟಿಗೆ ಈ ಥರದ ಅಧ್ಯಯನ ಈಗ ವಿಶಾಲವ್ಯಾಪ್ತಿಯಲ್ಲಿ ಸಾಗುತ್ತಿದೆ. ಭಾಷಿಕ ಸ್ವರೂಪವು ತನ್ನೊಡಲಲ್ಲಿ ಸಾಂಸ್ಕೃತಿಕ–ತಾತ್ತ್ವಿಕ ವಿವರಗಳನ್ನು ಅಡಗಿಸಿಕೊಂಡಿರುತ್ತದೆಂಬುದನ್ನು ಮೇಲಿನ ನನ್ನ ಮಾತುಗಳಲ್ಲಿ ಪ್ರಸ್ತಾಪಿಸಿದ್ದೇನೆ. ಇದನ್ನು ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸಬಹುದು. 'ಗಾಂಧೀಟೋಪಿ' ಒಂದು ಸಾಂಸ್ಕೃತಿಕ ಪರಿಭಾಷೆ. ಇದು ಮೊದಲು ದೇಶಭಕ್ತಿಯ, ಪ್ರಾಮಾಣಿಕತೆಯ ಸಂಕೇತವಾಗಿತ್ತು, ಸ್ವಾತಂತ್ರ್ಯ ಪೂರ್ವದಲ್ಲಿ ಮಹತ್ತರವಾದ ಪಾತ್ರವನ್ನೂ ವಹಿಸಿತ್ತು. ಸ್ವಾತಂತ್ರ್ಯಾನಂತರ 'ಗಾಂಧೀಟೋಪಿ' ಎಂಬುದು ಅಪ್ರಮಾಣಿಕರ, ವಂಚಕರ ಸಂಕೇತವಾಗಿ ಪರಿವರ್ತನೆಗೊಂಡಿದೆ. 'ಸಮಯ'ದ ಹಿನ್ನೆಲೆಯಲ್ಲಿ ಸಂಕೇತಗಳು ಆಶಯಗಳು ಹೇಗೆ ರೂಪುಗೊಳ್ಳುತ್ತದೆಂಬುದಕ್ಕೆ ಇದಕ್ಕಿಂತ ಆಧುನಿಕವಾಗಿ ಬೇರೆ ಉದಾಹರಣೆ ಕೊಡಬೇಕಾಗಿಲ್ಲ. ಅರಿಸ್ಟಾಟಲ್‌ನ 'Cultural Duration' ಬಗೆಗೆ ಇದ್ದ ಅಭಿಪ್ರಾಯವನ್ನು ಈ ದಿಕ್ಕಿನಲ್ಲಿ ಗಮನಿಸಬಹುದು. ಈ ಸ್ವರೂಪದ ವೈಧಾನಿಕ ಅಧ್ಯಯನದಿಂದ ಆಯಾ ಭಾಷಿಕರ ಸಾಂಸ್ಕೃತಿಕ ವಿವರಗಳೂ ಕಣ್ಣಿಗೆ ಥಾಟಿಸುತ್ತವೆ. ತನ್ಮೂಲಕ ಆ ಸಾಂಸ್ಕೃತಿಕ–ಚರಿತ್ರೆಯೂ ಮನವರಿಕೆಯಾಗುತ್ತದೆ. ಆದರೆ:

ಭಾಷೆಯು ಇತಿಹಾಸದ ಕಕ್ಷೆಯಲ್ಲಿ ಉಳಿಯುವುದರಿಂದ ಸಾಂಸ್ಕೃತಿಕ ಸಂಕೇತಗಳು ತಮ್ಮ ಅರ್ಥವನ್ನು ಬಿಚ್ಚಿಡುತ್ತದೆ. ಅಂದರೆ : ನಿನ್ನೆಯ ಇತಿಹಾಸ ತಿಳಿಯದೆ ನಾಳಿನ ಬದುಕನ್ನು ಕಾಣುವುದಕ್ಕೆ ಸಾಧ್ಯವಿಲ್ಲ. ಅಂದರೆ : ಬಾಳ್ವೆ, ಜೀವನ ಸಂತತ ಮತ್ತು ಸಾಂಗತ್ಯವುಳ್ಳದ್ದು ನಿನ್ನೆ-ಇಂದುಗಳೊಳಗಿಂದ ನಾಳೆಯ ಆಗಾಮಿ ಕಾಲದವರೆಗೂ ಹರಡಿಕೊಂಡಿರುವ ವ್ಯಾಪ್ತಿ ಇದೆ. ಮುಂದೆ ನಾನು ಬುದ್ಧಿ ಮತ್ತು ಪ್ರಜ್ಞೆಗಿರುವ ಭಾಷಿಕ ತನ್ಮೂಲಕ ಸಾಂಸ್ಕೃತಿಕ ಆಶಯಗಳನ್ನು ವಿವರಿಸುವುದಕ್ಕೆ ಪೂರ್ವಪೀಠಿಕೆಯಾಗಿ ಈ ಮಾತುಗಳನ್ನು ಬರೆಯಬೇಕಾಯಿತು.

ಬುದ್ಧಿ ಮತ್ತು ಪ್ರಜ್ಞೆ ಸಮಾನವಾದ ಸಂಕೇತವುಳ್ಳ ಪದಗಳಲ್ಲ-ಎಂಬುದಕ್ಕೆ ಬಹಳಷ್ಟು ದಾಖಲೆಗಳಿವೆ. ಬುದ್ಧಿಯು ಆಯುರ್ಮಾನಕ್ಕೆ ಸೀಮಿತವಾದರೆ; ಪ್ರಜ್ಞೆಯು ಸಂತತ ಮತ್ತು ಸಾಂಗತ್ಯವುಳ್ಳದ್ದು ಆಗಿರುತ್ತದೆಂಬುದಕ್ಕೆ ಅಪೂರ್ವವಾದ ಈ ಮಾತುಗಳನ್ನು ನಾವು ಗಮನಿಸಬಹುದು.

ಬುದ್ಧಿಃ ತಾತ್ಕಾಲಿಕೀ ಜ್ಞೇಯಾ ।
ಪ್ರಜ್ಞಾ ತ್ರೈಕಾಲಿಕೀ ಮತಾ ॥[1]

ಅಂದರೆ : ಈಗ ನಡೆಯುವುದನ್ನು ಪರಿಶೀಲಿಸುವುದು ಬುದ್ಧಿ. ನಿನ್ನೆ-ಇಂದು-ನಾಳೆ ಈ ತ್ರಿಕಾಲಗಳನ್ನು ಒಳಗೊಳ್ಳುವುದು ಪ್ರಜ್ಞೆ. ಮೇಲಿನ ಭಟ್ಟತೌತನ ಮಾತು ಬುದ್ಧಿ ಮತ್ತು ಪ್ರಜ್ಞೆ ಇವೆರಡರ ಸಾಂಕೇತಿಕ ಆಶಯಗಳನ್ನು ಬಹಳ ಖಚಿತವಾಗಿ ಹೇಳಿದೆ. ಈ ಪರಿಭಾಷೆಗಳಿಗೆ ಇದ್ದ ಅರ್ಥ ವ್ಯತ್ಯಾಸಗಳನ್ನು ಸ್ಪಷ್ಟವಾಗಿಯೇ ಹೇಳಿದ್ದಾನೆ. ಅವನೇ ಮುಂದುವರೆದು ಹೇಳುವ ಮತ್ತೊಂದು ಮಾತನ್ನು ಈ ಲೇಖನದ ಆದಿಯಲ್ಲಿಯೇ ಉದಾಹರಿಸಿದ್ದೇನೆ. 'ಪ್ರಜ್ಞಃ ಉಪಜ್ಞಃ ತಯೋಃ ಆದ್ಯಂ' ಪ್ರಜ್ಞೆಯು ಆದ್ಯ. ಮೊದಲು ಎಂಬಲ್ಲಿ ಅವನು ಬಳಸಿರುವ ಈ 'ಆದ್ಯ' ಎಂಬ ವಿಶೇಷಣ ಬಹಳ ಮಹತ್ವದ್ದು ಆಗಿದೆ.

ಆದರೆ, ಪ್ರಜ್ಞೆಗೆ ಇದ್ದ ಪ್ರಾಶಸ್ತ್ಯವನ್ನು ಹಲವು ಬಗೆಯಲ್ಲಿ ನಷ್ಟಪಡಿಸಲಾಗಿದೆ. ಬುದ್ಧಿಗೆ ಪ್ರಾಧಾನ್ಯ ಕೊಡಲಾಗಿದೆ. 'ಪ್ರಜ್ಞೆ'ಯನ್ನು ಬುದ್ಧಿಯ ಮಟ್ಟಕ್ಕೆ ಎಳೆದು ತಂದು ನಿಲ್ಲಿಸಲಾಗಿದೆ. ಇದಕ್ಕೆ ಪ್ರತಿನಿಧಿಸುವಂಥ ಭಗವದ್ಗೀತೆಯ ಈ ಮಾತುಗಳನ್ನು ಗಮನಿಸಬಹುದು. ಮನಸ್ಸು ಮತ್ತು ಬುದ್ಧಿ-ಇವೆರಡರಲ್ಲಿ ಯಾವುದು ಮೊದಲು ಅಂದಾಗ ಬುದ್ಧಿಯೇ ಶ್ರೇಷ್ಠ ಎಂದು ಹೇಳಲಾಗಿದೆ. ಪ್ರಜ್ಞಾಯುಕ್ತವಾದ ಮನಸ್ಸನ್ನು ಹೀಗಳೆಯುವುದರ ಮೂಲಕ ಆಗಿರುವ ಪ್ರಜ್ಞಾ ಅವಜ್ಞೆ. ಇವೆಲ್ಲಕ್ಕೂ ಕಿರೀಟ ಇಡುವಂತೆ 'ಸ್ಥಿತಪ್ರಜ್ಞಃ' ಆಗಿರುವುದನ್ನು ನಾವು ಕಾಣಬಹುದು. ಪ್ರಜ್ಞೆಯನ್ನು ಸ್ಥಗಿತಗೊಳಿಸಲಾಗಿದೆ. ಇನ್ನು ಬುದ್ಧಿಗೆ ಸಂಬಂಧಿಸಿರುವ ಹಾಗಿನ ಈ ಮಾತುಗಳನ್ನು

---

1 ಕಾವ್ಯ ಪ್ರಕಾಶದ ಸಂಪ್ರದಾಯ ಪ್ರಕಾಶಿನೀ ವ್ಯಾಖ್ಯಾನ ಪು. ೧೩ರಲ್ಲಿ ಉದಾಹೃತವಾಗಿದೆ ತ್ರಿವೇದ್ರಂ ಸಂಸ್ಕೃತಮಾಲೆ.

ಗಮನಿಸಬಹುದು : ಬುದ್ಧಿಯುಕ್ತಃ [೨-೫೦] ಬುದ್ಧಿರ್ಜ್ಞಾನಮಸಂಮೋಹಃ [೧೦-೪] ಮಯ್ಯರ್ಪಿತ ಮನೋಬುದ್ಧಿಃ [೮-೭] ಬುದ್ಧೇರ್ಭೇದಂ [೧೮-೨೯] ಬುದ್ಧಿರ್ಬುದ್ಧಿಮತಾಮಸ್ಮಿ [೭-೧೦] ವ್ಯವಸಾಯಾತ್ಮಿಕಾ ಬುದ್ಧಿಃ [೨-೪೧] ಬುದ್ಧಯಃ ಅವ್ಯವಸಾಯಿನಾಂ [೨-೪೨] ಬುದ್ಧೌ ಶರಣ ಮನ್ವಿಚ್ಛ [೨-೪೯] ಸಮಾಧಃ ಅಚಲಾ ಬುದ್ಧಿಃ [೨-೫೩] ಬುದ್ಧಿಮಾನ್‌ಸ್ಯಾತ್ [೧೫-೨೦] **ದದಾಮಿ ಬುದ್ಧಿಯೋಗಂ** [೧೦-೧೦] ಸಮಬುದ್ಧಿಃ [೬-೯] ಯತೇಂದ್ರಿಯಾಣಿ ಮನೋ ಬುದ್ಧಿಃ [೨-೨೮] ಇಂದ್ರಿಯಾಣಿ ಮನೋಬುದ್ಧಿಃ [೩-೪೦] ಬುದ್ಧಿ ನಾಶಾತ್ ಪ್ರಣಶ್ಯತಿ [೨-೬೩] ನಾಸ್ತಿ ಬುದ್ಧಿರಯುಕ್ತಸ್ಯ [೨-೬೬] ಬುದ್ಧ್ಯಾ ವಿಶುದ್ಧಯಾ [೧೮-೫೧]–ಹೀಗೆ 'ಬುದ್ಧಿಮಹಾತ್ಮೆ'ಯನ್ನು ಉಜ್ವಲಗೊಳಿಸುವ ಹಾಗಿನ ಹಾಗೂ ಪ್ರಜ್ಞಾನಷ್ಟದ ತಂತುವನ್ನು ಹಿಮ್ಮೆಟ್ಟಿಸುವ ಹಾಗಿನ ಈ ಮಾತುಗಳನ್ನು ವಿವರಾತ್ಮಕವಾಗಿ ವಿವರಿಸುತ್ತಾ ಹೋಗಬಹುದು. ಇನ್ನು ಬುದ್ಧಿಯ ಸ್ಥಾನಕ್ಕೆ ಪ್ರಜ್ಞೆಯನ್ನು ಎಳೆದು ತರಲಾಗಿದೆ–ಎಂಬುದಕ್ಕಿರುವ ಈ ಮಾತುಗಳನ್ನು ಗಮನಿಸಬಹುದು : ತದಸ್ಯ ಹರತಿ ಪ್ರಜ್ಞಾಂ [೨-೬೭] ತಸ್ಯ ಪ್ರಜ್ಞಾ ಪ್ರತಿಷ್ಠಿತಾ [೨-೬೮] ಸ್ಥಿತಪ್ರಜ್ಞಸ್ಯ **ಕಾ ಭಾಷಾ** [೨-೫೪] ಸ್ಥಿತಪ್ರಜ್ಞನಾಗಿರುವನಿಗೆ ಮಾತೆಲ್ಲಿಯದು ? ಭಾಷೆ ಎಲ್ಲಿಯದು ? ಪ್ರಜ್ಞೆ ಇದ್ದರೆ ಮಾತು. ಪ್ರಜ್ಞೆಯ ಪ್ರಾದುರ್ಭಾವದೊಡನೆ ಭಾಷೆಯು ಆಕಾರ ಪಡೆಯತೊಡಗಿದೆ ಎಂಬುದಕ್ಕೆ ಈ ಶ್ಲೋಕವೇ ಸಾಕ್ಷಿಯಾಗಿದೆ. ಆದರೆ, ಪ್ರಜ್ಞೆಸ್ಥಿತವಾದೊಡನೆ 'ಭಾಷೆ'ಯೂ ಸಹ ಸ್ಥಿತವಾಗುತ್ತದೆಂಬುದನ್ನು ಇದರ ಹಿಂದಿರುವ ಸಾಂಸ್ಕೃತಿಕ ಆಶಯದಿಂದ ತಿಳಿಯಬಹುದು. ಆತ್ಮೆಸ್ಯೇವಾತ್ಮನ್ಯಾತುಷ್ಟಃ ಸ್ಥಿತಪ್ರಜ್ಞಃ [೨-೫೫]ಇಂದ್ರಿಯಾಣೀಂದ್ರಿಯಾರ್ಥೇಭ್ಯಃ ತಸ್ಯ ಪ್ರಜ್ಞಾ ಪ್ರತಿಷ್ಠಿಂತಾ [೨-೫೮] ಇಂದ್ರಿಯ, ನಿತ್ಯ ವರ್ತಮಾನ,ಆಯುರ್‌ಮಾನಕ್ಕೆ 'ಪ್ರಜ್ಞೆ'ಯನ್ನು ತಂದು ನಿಲ್ಲಿಸಿರುವುದನ್ನು ಈ ಮೇಲಿನ ಮಾತುಗಳಿಂದ ಮನವರಿಕೆಯಾಗಿಬಹುದು.

ಅಂದರೆ ಮಾನವ ಸಮಾಜದ ವಿಕಾಸದ ಸಂದರ್ಭದಲ್ಲಿ ಮೊದಲು'ಪ್ರಜ್ಞೆ'ಯು ಕಾಣಿಸಿಕೊಂಡಿತು. ಆ ನಂತರದಲ್ಲಿ ಬುದ್ಧಿ ಮತ್ತು ಪ್ರಜ್ಞೆಗೂ ಇರುವ ಅಂತರ ನಾಶವಾಯಿತು. ವ್ಯಾಕರಣದ ವಿಚಾರದಲ್ಲಿ ಬುದ್ಧಿಗೆ 'ಬುಧ್' ಅವಗಮನೇ ಎಂಬ ಅರ್ಥದ ಧಾತುವಿನಿಂದಲೇ ನಿಷ್‌ಪನ್ನವಾಗಿದೆ. ಇದಕ್ಕೆ ಸೂಕ್ಷ್ಮಾರ್ಥ ಏನೆಂದರೆ: ಯಾವುದಾದರೊಂದು ಇಂದ್ರಿಯದಿಂದ ವಿಷಯಗಳನ್ನು ಗ್ರಹಿಸುವ 'ಶಕ್ತಿ' ಗೆ ಬುದ್ಧಿ ಎಂದು ಅರ್ಥವಾಗುತ್ತದೆ. ಆದರೆ 'ಪ್ರಜ್ಞೆ' ಯು ಇಂದ್ರಿಯ ವಿಶೇಷದ್ದಲ್ಲ ಎಂಬುದಕ್ಕೆ ಅದಕ್ಕಿರುವ ಸೂಕ್ಷ್ಮಾರ್ಥವೇ ವ್ಯಕ್ತ ಮಾಡುತ್ತದೆ. ಮೋನಿಯರ್ ವಿಲಿಯಂಸ್ ಕೂಡ ಬುದ್ಧಿಗೆ Reason ಎಂಬ ಪದವನ್ನೇ ಬಳಸಿದ್ದಾನೆ. (P. 733) ಇನ್ನು ಅಮರ ಸಿಂಹನು ತನ್ನ ಕೋಶದ ಆ ವರ್ಗಕ್ಕೆ 'ಧೀವರ್ಗ' ಎಂದು ಹೆಸರು ಕೊಟ್ಟು 'ಬುದ್ಧಿಃ, ಮನೀಷಾ,ಧಿಷ್ಣಾ, ಧೀಃ,ಪ್ರಜ್ಞಾ, ಶೇಮುಷೀ, ಮತಿಃ .ಪ್ರೇಕ್ಷಾ, ಉಪಲಬ್ಧಿಃ, ಚಿತ್. ಸಂವಿತ್, ಪ್ರತಿಪತ್ ಜ್ಞಪ್ತಿಃ, ಚೇತನಾ–ಈ ೧೪ ಬುದ್ಧಿಗೆ

ವಾಗಿ ಬಳಸಿದ್ದಾನೆ. ಅಂದರೆ: ಪ್ರಜ್ಞೆಯು ಭಗವದ್ಗೀತೆಯ ಕಾಲಕ್ಕೂ ಮುಂಚೆ ವೇದದಲ್ಲಿಯೇ ('ಪ್ರಜ್ಞೆ' ಯು) ಬುದ್ಧಿಯ ಮಟ್ಟಕ್ಕೆ ಇಳಿಯಿತು ಎಂಬುದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ಜಾತವೇದ ಎಂಬ ಅಗ್ನಿಯು ನಾಚಿಕೇತಾಗ್ನಿ ಆಯಿತು ಎಂಬ ಕಥೆಯು ಹಿನ್ನೆಲೆಯಲ್ಲಿ ಪ್ರಜ್ಞೆಯು ವೈಯಕ್ತಿಕವಾದದ್ದನ್ನು ತಿಳಿಸುತ್ತದೆ. ಮನ್> ಮನುಜ, ಮಾನವ, ಮನೀಷೆ,– ಇವುಗಳು ಪ್ರಜ್ಞಾಯುಕ್ತ ಮನಸ್ಸಿನೊಡನೆ ಸಂಬಂಧವುಳ್ಳವುಗಳು–ಅಲ್ಲವೇ? ವಿಚಾರ ಮಾಡಿರಿ.

ಋಗ್ವೇದದಲ್ಲಿ ಬುದ್ಧಿಯ ಮೇಲಾಟವೇ ನಡೆದಿದೆ–ಎಂಬುದಕ್ಕೆ ಈ ಮಾತುಗಳನ್ನು ಗಮನಿಸಬಹುದು. 'ಸತೋ ಬಂಧುಮಸತಿ ನಿರವಿಂದಶ್ಹೃದಿ ಪ್ರತೀಷ್ಯಾ ಕವಯೋ ಮನೀಷಾ (X–೧೨೯–೧೪) ಜಗತ್ತಿಗೆ ಬಂಧು ಕರ್ಮ ಸಮೂಹವನ್ನು ಕವಿಗಳು ಹೃದಯದಲ್ಲಿ ಚೆನ್ನಾಗಿ ವಿಚಾರ ಮಾಡಿ ಕಾಣುವಿರುವುದನ್ನು ಕಂಡುಕೊಂಡರು ಎಂದಿವೆ. ಇಲ್ಲಿ ಅಸತಿ ನಿರವಿಂದನ್, ಕವಯಃ, ಈ ಮಾತುಗಳನ್ನು ಗಮನಿಸಬಹುದು. ನಿ ಚಿಕ್ಯುಃ ಕವಯೋ ಮನೀಷಾ (X–೧೭೯–೯) ಕವಿಗಳು ಬುದ್ಧಿಯಿಂದ ತಿಳಿಯುತ್ತಾರೆ. ಎಂದಿರುವಲ್ಲಿ ಕವಿ> ಬುದ್ಧಿ ಯೋಗವನ್ನು ನೀಡುವವನೇ ಎಂದು ಅರ್ಥ. 'ನಿಯಮ ರಹಿತ' ಆಧವನು. ಎಂಬ ಒಪ್ಪಿಗೆಯೇ ಇಲ್ಲಿ ಉಂಟು. 'ಯಜ್ಞಂ ವಿಮಾಯ ಕವಯೋ ಮನೀಷಾ' (X–೧೧೪–೬) ಕವಿಗಳು ಬುದ್ಧಿಯಿಂದ ಯಜ್ಞವನು ನಿರ್ಮಿಸಿ–ಎಂದಿದೆ. 'ತಾಂ ದ್ಯೋತಮಾನಾಂ ಸ್ವರ್ಯಂ ಮನೀಷಾಂ ಋತಸ್ಯ ಪದೇ ಕವಯೋ ನಿ ಪಾಂತಿ (X–೧೭೭–೨) ಪ್ರಕಾಶಮಾನವಾದ, ಸ್ವರ್ಗಸಾಧನವಾದ ಬುದ್ಧಿಯಿಂದ ಮೂರುವೇದಗಳ ರೂಪವಾದ ವಾಕ್ಯವನ್ನು ಋತದ ಸ್ಥಾನವಲ್ಲಿ ಕವಿಗಳು ರಕ್ಷಿಸುತ್ತಾರೆ ಎಂದಿದೆ. ಕವಯಃ–ಎಂಬುದಕ್ಕೆ ಋಷಿ ಎಂಬ ಅರ್ಥವನ್ನು ಸಾಯಣರು ಹೇಳುತ್ತಾರೆ. ಆದರೆ, 'ಋಷಿ' ಪರಿಭಾಷೆಯು ಹೊತ್ತುಕೊಳ್ಳುವ ಅರ್ಥವೇ ಬೇರೆ. ಇದಕ್ಕೆ ವಿರುದ್ಧವಾಗಿ ನಿಯೋಜಿಸಿರುವ 'ಮುನಿಯಂತಿ' ಪದಗಳನ್ನು ಸಾಯಣರು ಗಮನಿಸಿಯೇ ಇಲ್ಲವಲ್ಲ. ಇನ್ನು 'ಮನೀಷಾ' ಎಂಬುದಕ್ಕೆ ಬಲವಂತವಾಗಿ 'ಮನೀಷಯಾ ಬುದ್ಧ್ಯೈವಂ' ಎಂದು ಅರ್ಥ ಹೇಳಿದ್ದಾರೆ. ಆದರೆ, ಮನೀಷೆ ಎಂಬುದರಲ್ಲಿ 'ಮನ್' ಚಿಂತನಾರ್ಥಕವಾದ ಸಾಂಕೇತಿಕ ಆಶಯವೇ ಉಂಟು. ಅಂದರೆ : ಇಂದಿನ ಋಗ್ವೇದಕ್ಕೆ 'ಮನೀಷೆ' ಋಷಿ, ಇವು ಮಾನ್ಯವಿಲ್ಲ ಎಂಬುದು ಅರ್ಥವಾಗುತ್ತದೆ. 'ಪ್ರಜ್ಞಾ ನೇತ್ರೋ ಲೋಕಃ' ಎಂದು 'ಪ್ರಜ್ಞಾ ಆರಾಧಕರಾದ' ಮಾತೂ ಕೂಡ ಹೇಗೋ ಉಪನಿಷತ್ತಿನಲ್ಲಿ ಉಳಿದುಕೊಂಡು ಬಂದಿದೆ. ಆಶ್ಚರ್ಯ !!

ಭಾಷೆ-ಧರ್ಮ-ಸಂಸ್ಕೃತಿ– ಇವುಗಳು ಒಂದಕ್ಕೊಂದು ಅನ್ಯೋನ್ಯಾಶ್ರಯವಿದೆ. ಇವೆಲ್ಲ ಸರಳರೇಖೆಯಲ್ಲೇ ಪ್ರವಹಿಸುವಂಥದ್ದು. ಭಾಷೆಯಾಗಲಿ, ಧರ್ಮವಾಗಲಿ ವಿಕೃತಗೊಂಡರೆ ಸಂಸ್ಕೃತಿಯು ವಿಕೃತಗೊಳ್ಳುತ್ತದೆ. ಎಂಬುದಕ್ಕೆ 'ಭಾಷೆ' ಯಲ್ಲಿ ಆಗಿರುವ ಪಲ್ಲಟವನ್ನು, ತನ್ಮೂಲಕ ಆಗಿರುವ ಸಂಸ್ಕೃತಿಯ ತಿರುವು–ಮುರುವು

ಗಳನ್ನು ಇವುಗಳ ಮೂಲಕ 'ಧರ್ಮ'ಕ್ಕೆ ತನ್ನ ಮೊದಲ ತಾತ್ತ್ವಿಕಾರ್ಥವನ್ನು ಕಳೆದುಕೊಂಡದ್ದನ್ನು ಅರಿಯಬಹುದು ಅಲ್ಲವೇ ?

ಸಂಗ್ರಹವಾಗಿ ಹೇಳುವುದಾದರೆ : ೧) ರಾತ್ರಿಯು ಹಗಲನ್ನು ನಿರಾಕರಿಸುತ್ತದೆ. ರಾತ್ರಿಯು ಬುದ್ಧಿಯನ್ನು ಸಂಕೇತಿಸಿದರೆ, ಹಗಲು ಪ್ರಜ್ಞೆಯನ್ನು ಸಂಕೇತಿಸುತ್ತದೆ. ಆದರೆ ಹಗಲಿನ ಅರ್ಜುನನು ರಾತ್ರಿಯ ಕೃಷ್ಣನನ್ನು ಅನುಸರಿಸಿದ್ದಾನೆ-ಎಂದಿರುವ ಈ ಪವಾಡ ಕಥೆಯಲ್ಲಿ ಹಗಲು-ರಾತ್ರಿಯನ್ನು ಅನುಸರಿಸುತ್ತಿರುವುದನ್ನು ನಾವು ಕಾಣಬಹುದು. ಆದರೆ, ಕಣ್ಣು ತೆರೆದವರಿಲ್ಲ. ೨) ಚಂದ್ರ-ಸೂರ್ಯರುಗಳ ಭೇದವನ್ನು ನಿರಾಕರಿಸುತ್ತದೆ-ಇಂದಿನ ಋಗ್ವೇದ. ಆದರೆ, ಚಂದ್ರ-ಇಂದ್ರಿಯ ವಿಷಯಕ ಬುದ್ಧಿಯನ್ನು ಸಂಕೇತಿಸಿದರೆ ಅಂದರೆ ಲೈಂಗಿಕ ಪ್ರತಿಮೆಯಾದರೆ, ಸೂರ್ಯ ಪ್ರಜ್ಞೆಯ ಪ್ರತೀಕವಾಗುತ್ತದೆ. 'ಸೂರ್ಯಲೋಕಸ್ಯ ಉಪರಿ ಚಂದ್ರಮಸೋ ಲೋಕಃ' ಎಂಬ ಮಾತಿನಲ್ಲಿ ಸೂರ್ಯನ ಮೇಲೆ ಚಂದ್ರನನ್ನು ಕುಳ್ಳಿರಿಸಿರುವುದನ್ನು-ನಮ್ಮ ಅನೇಕ ಶಿಲ್ಪಕಲೆಯಲ್ಲಿ ಸೂರ್ಯನಿಗಿಂತ ಚಂದ್ರನೇ ಪ್ರಾಧಾನ್ಯ ವಹಿಸಿರುವುದನ್ನೂ ಸೂರ್ಯನನ್ನು 'ಆದಿತ್ಯ' ನನ್ನಾಗಿ ಮಾರ್ಪಡಿಸಿರುವುದರಲ್ಲಿ ಕಾಣಬಹುದು. ೩) ಋಷಿ-ಮುನಿಗಳ ಭೇದವನ್ನು ಇಲ್ಲವಾಗಿಸುತ್ತದೆ. ಋಷಿಯು 'ಋತ' ದ ಸ್ಥಾನದಲ್ಲಿ ಇದ್ದರೆ 'ಮುನಿ' ಯು ಅಭಾವಾತ್ಮಕವಾದುದನ್ನೇ ಭಾವಾತ್ಮಕವಾಗಿ ಮಾಡುವ ಪವಾಡವನ್ನು ಪಡೆದಿರುತ್ತಾನೆ. ೪) ಸ್ವಾಯಂಭುವ ಮನು-ವೈವಸ್ವತ ಮನು ಅಂತರ ಅರಿಯದಾಗಿದೆ, ಇಲ್ಲಿ ಸ್ವಯಂಭುವ ಮತ್ತು ವೈವಸ್ವತನಿಗಿರುವ ಆದ್ಯ-ಇವೆರಡು ವಿಶೇಷಣಗಳು ಸಮಾನ ಅಲ್ಲ. ಸ್ವಾಯಂಭುವ> ಸ್ವಯಂ-ಭೂ- ಇದು 'ಕೃತಕ'. ವೈವಸ್ವತ > ಆದ್ಯ ಇದು ಅಭಿಜಾತ ! ವೈವಸ್ವತವನ್ನು ಏಳನೇ ಸ್ಥಾನಕ್ಕೆ ತಂದು ನಿಲ್ಲಿಸಿದೆ. ಸ್ವಾಯಂಭುವ ಮನುವನ್ನು ಮೊದಲ ಸ್ಥಾನಕ್ಕೇರಿಸಿದೆ. ಈ 'ಏಳು' ಅನಿಷ್ಟ ಸೂಚಕವಾದ ಸಂಖ್ಯೆ ಏಳು ಹೆಡೆ ಸರ್ಪ-ಎಂಬೆಲ್ಲ ವಿವರಗಳು ಇದರ ಬೆನ್ನೆಲುಬಿಗೆ ಇದೆ. ವೈವಸ್ವತ-ಎಂಬಲ್ಲಿ ವಿವಸ್ವಾನ್-ಎಲ್ಲೆಲ್ಲೂ ಬೆಳಕನ್ನು ಹರಡುವವನು ಎಂಬ ಮೂಲ ಅರ್ಥವೇ ಇದೆ. ಆದರೆ, ನಾವು ಮರೆತಿದ್ದೇವೆ. ಇಂದಿನ ಉಪಲಬ್ಧವಾದ ಋಗ್ವೇದವು ಬುದ್ಧಿಗೇ, ರಾತ್ರಿಗೇ, ಚಂದ್ರನಿಗೇ, ಮುನಿಗೇ, ಸ್ವಾಯಂಭುವ ಮನುವಿಗೆ, ಪ್ರಾಶಸ್ತ್ಯವನ್ನು ಕೊಡುವಾಗ ಇದಕ್ಕೂ ಮುನ್ನ ಪ್ರಜ್ಞೆಗೇ, ಹಗಲಿಗೇ, ಸೂರ್ಯನಿಗೇ, ಋಷಿಗೇ, ವೈವಸ್ವತ ಮನುವಿಗೇ ಪ್ರಾಧಾನ್ಯ ಇದ್ದಿರಬೇಕಿತ್ತು. ಇದು ನಷ್ಟವಾಗಿದೆ-ಎಂಬುದನ್ನೂ ಬಹಳ ಸ್ಪಷ್ಟವಾಗಿ ಗುರುತಿಸಬಹುದು. ನಮ್ಮ ಜಾಗತಿಕ ಸಮಾಜವು ಹಿಡಿದಿರುವ ದಿಕ್ಕನ್ನು ನೋಡಿದರೆ ನಾವು ಹೇಗೆ ಬುದ್ಧಿಗನುಸಾರವಾಗಿ ಬದುಕುತ್ತಿದ್ದೇವೆ-ಎಂಬುದನ್ನು ಅರಿಯಬಹುದು. ಪ್ರಾಣಲಿಂಗ ಪಾತಳಿಯ ಮೇಲೆ ಅವತರಿಸಿರುವ ಬುದ್ಧಿಯನ್ನು ನಾವು ಹಿಡಿಯಬೇಕೋ ಮನಸ್ ತತ್ತ್ವದ ಭಾವಾತ್ಮಕ ಸ್ವರೂಪದ ವಿಭಾಗತ್ರಯದ ಪಾತಳಿಯ ಮೇಲೆ ಇರುವ ಪ್ರಜ್ಞೆಯನ್ನು ನಾವು ಅಪ್ಪಿಕೊಳ್ಳಬೇಕೋ ಎಂಬ ಬಹು ದೊಡ್ಡ ಅಂಶ ಇಲ್ಲಿ ಎದುರಾಗುತ್ತದೆ. ಮಾನವ ಸಮಾಜ

ಹಾಗೂ ನಮ್ಮ ಪುರಾತನರು ಕಂಡ ಈ ವಿಭಾಗತ್ರಯ-ನಿನ್ನೆ–ಇಂದು–ನಾಳೆಯ ಕಡೆ ಸಂತತವಾಗಿ, ಸಾಂಗತ್ಯವಾಗಿ, ಸಾತತ್ಯವಾಗಿ ಹರಡಿಕೊಳ್ಳುವ ಆಶಯವನ್ನು ಹಿಡಿದು ಕೊಳ್ಳಬೇಕು. ಅದು ಪ್ರಜ್ಞೆ ಎಂಬ ಅಂಶವನ್ನು ಎತ್ತಿ ಹೇಳಿದ್ದಾರೆ. ಭಾಷೆ: ಸಂಸ್ಕೃತಿ: ಧರ್ಮಗಳಲ್ಲಿ ಸಾಹಚರ್ಯ ಅನ್ಯೋನ್ಯಾಶ್ರಯ ಇದ್ದು ವಿಶ್ವನಿಯಮಕ್ಕೆ ಅನುಗುಣ ವಾಗಿ ಬದುಕಬೇಕೆಂಬುದು ಹೋಗಿ ವಿಭಾಗದ್ವಯವಾದ ನಿನ್ನೆ-ಇಂದು ಮಾತ್ರವೇ ನಮ್ಮ ಕಾಲವಾಗಿದೆ. ನಿನ್ನೆಯೇ ಇಂದುವಾಗುವ ನಿತ್ಯವರ್ತಮಾನವಾಗುವ, ಆಭಾ ವಾತ್ಮಕ ಸ್ವರೂಪದ ಆಶಯದ ಮೇಲೆ ನಮ್ಮ ದೈವತಕಥೆಗಳು, ಋಗ್ವೇದ. ಉಪ ನಿಷತ್ತು, ಗೀತೆಗಳು ನಿರ್ಮಿತಗೊಂಡಿಲ್ಲವೋ ಎಂಬುದನ್ನು ಮರಳಿ ವಿಮರ್ಶಿತ ಗೊಳಿಸಬೇಕಾದದ್ದು ಅವಶ್ಯವಿದೆ. ನಮ್ಮ ಮೇಧಾವೀ ವಿದ್ವಾಂಸರು ಇತ್ತಗಮನ ಹರಿಸಬೇಕೆಂದು ಆಶಿಸುತ್ತೇನೆ.

---

# ಶ್ರೀಮದ್ ಭಗವದ್ಗೀತೆಯಲ್ಲಿಯ
# ನರನ ರಥದ ಮೂಲಮಾದರಿಗಳು

ಪ್ರೊ. ಭಾಸ್ಕರ ಪತ್ತಾರ

ಮೂಲಮಾದರಿ ಸಾಂಕೇತಿಕ ಶಾಸ್ತ್ರದ (Archetypal symbolism) ಅಧ್ಯಯನವು ಯಾವುದಾದರೊಂದು ತತ್ತ್ವ ಪ್ರಣಾಳಿಯ ಮೂಲ ಪ್ರೇರಣೆ, ಉದಯ, ಬೆಳವಣಿಗೆ ಮತ್ತು ಅದರಲ್ಲಿ ಅಡಕವಾದ ಆಶಯಗಳನ್ನು ಗ್ರಹಿಸುವಲ್ಲಿ ಅತ್ಯಂತ ಸಹಾಯಕಾರಿಯಾಗಿರುವುದರಿಂದ, ಇತ್ತೀಚೆ ಅದರ ಅಧ್ಯಯನಕ್ಕೆ ಸಾಕಷ್ಟು ಒತ್ತು ಕೊಡಲಾಗುತ್ತಿದೆ. ಒಂದು ಕೃತಿಯ ಮೂಲಮಾದರಿ ಸಾಂಕೇತಿಕತೆಯನ್ನು ಗಣನೆಗೆ ಎತ್ತಿಕೊಳ್ಳದಿದ್ದರೆ, ಆ ಕೃತಿಯ ಸಮಗ್ರ ಅಧ್ಯಯನಕ್ಕೆ ಕುಂದು ಬಾರದೇ ಇರದು. ಕೃತಿಯಲ್ಲಿ ಅಡಕವಾದ ಮೂಲಮಾದರಿ ನಮಗೆ ಒಮ್ಮೆಲೇ ಗೋಚರವಾಗಲಿಕ್ಕಿಲ್ಲ ; ಆದರೂ ಸ್ವಲ್ಪ ಆಳವಾದ ಅಧ್ಯಯನದಿಂದ ಅದನ್ನು ಗುರುತಿಸಬಹುದು. ಕೃತಿಯ ತಳಪಾಯದಲ್ಲಿರುವ (Base) ಮೂಲ ಮಾದರಿ ಸಾಂಕೇತಿಕತ್ತ್ವವೇ ಕೃತಿಯ ಅಂಗರಚನೆಗೆ ಕಾರಣವಾಗುತ್ತದೆ. ಪ್ರತಿ ಸಂಸ್ಕೃತಿಯ ಉಗಮದಲ್ಲಿ; ಅದರ ಸಮಷ್ಟಿ ರೂಪದ ಸಮಾಜ ರಚನೆಯಲ್ಲಿ, ಕೆಲವು ಪ್ರಧಾನವಾದ ಮೂಲ ಪ್ರೇರಣೆಗಳ ಹಿನ್ನೆಲೆಯಲ್ಲಿ ಈ ಮೂಲಮಾದರಿ ಸಾಂಕೇತಿಕತ್ತ್ವ ತಲೆದೋರುತ್ತದೆ; ಮುಂದೆ ಅದು ಆ ಸಂಸ್ಕೃತಿಯ ಬಳುವಳಿಯಾಗಿ, ಪ್ರೇರಕ ತತ್ತ್ವವಾಗಿ ಕಾಲಾನಂತರದಲ್ಲಿ ತತ್ತ್ವ ಪ್ರಣಾಲಿಯಾಗಿ ಪರಂಪರೆಯ ಅವಿಭಾಜ್ಯ ಅಂಗವಾಗಿ ಮಾರ್ಪಡುತ್ತದೆ. ಪ್ರತಿ ಕಾವ್ಯ, ಕಾದಂಬರಿ, ನಾಟಕಾದಿ ಸಾಹಿತ್ಯ ಪ್ರಕಾರಗಳಲ್ಲಿ ಈ ಮೂಲಮಾದರಿ ವ್ಯಕ್ತವಾಗಿ ಇಲ್ಲವೆ ಅವ್ಯಕ್ತವಾಗಿ ಅಭಿವ್ಯಕ್ತಿಪಡೆದಿರುತ್ತದೆ.ಆದುದರಿಂದ ಕೃತಿಯ ಮೂಲ ಪ್ರೇರಣಾ ತತ್ತ್ವವನ್ನು ಗ್ರಹಿಸುವಲ್ಲಿ, ಮೂಲ ಮಾದರಿ ಸಾಂಕೇತಿಕ ಶಾಸ್ತ್ರದ ಅಭ್ಯಾಸವು ಇಂದು ಎಂದಿಗಿಂತಲೂ ಮಹತ್ತ್ವದ್ದಾಗಿದೆ.

ಈ ಹಿನ್ನೆಲೆಯಲ್ಲಿ ಮಹಾಭಾರತಾಂತರ್ಗತ ಶ್ರೀಮದ್ ಭಗವದ್ಗೀತೆಯಲ್ಲಿಯ ನರನ ರಥದ ಮೂಲಮಾದರಿಯ ಅಧ್ಯಯನದಿಂದ ಗೀತೆಯಲ್ಲಿ ಅಡಕವಾದ ಮೂಲ ಪ್ರೇರಣಾತತ್ತ್ವ ಮತ್ತು ಆಶಯಗಳನ್ನು ಗ್ರಹಿಸುವ ಪ್ರಯತ್ನ ಪ್ರಸ್ತುತ ಲೇಖನದಲ್ಲಿ ಮಾಡಲಾಗಿದೆ. ಒಂದು ಕೃತಿಯಲ್ಲಿ ಅಡಕವಾದ ಮೂಲಮಾದರಿಯನ್ನು ಅಭ್ಯಸಿಸುವಾಗ ಅದರ ಪೂರ್ವೇತಿಹಾಸ, ಪರಂಪರೆ, ಅವಿಚ್ಛಿನ್ನ ಪರಂಪರೆಯ ಜೀವಂತ ಸಾಕ್ಷಿಯಾದ ಜಾನಪದ ಇವುಗಳನ್ನೆಲ್ಲ ಗಣನೆಗೆ ಎತ್ತಿಕೊಳ್ಳಬೇಕಾಗುತ್ತದೆ. ಮಹಾಭಾರತಾಂತರ್ಗತ ಶ್ರೀಮದ್ ಭಗವದ್ಗೀತೆಯಲ್ಲಿ ವರ್ಣಿಸಲ್ಪಟ್ಟ ನರನ (ಅರ್ಜುನ) ರಥಕ್ಕೆ ಕೃಷ್ಣ ಸಾರಥಿ. 'ಕುರುಕ್ಷೇತ್ರ' ದಲ್ಲಿ ಯುದ್ಧಕ್ಕೆ ಸನ್ನದ್ಧನಾದ ನರನಿಗೆ (ಅರ್ಜುನನಿಗೆ)

ಉಪೆರತಿಯಾದಾಗ ಅವನ ಸಾರಥಿ (ರಥ ಸಹಿತನು) ಕೃಷ್ಣನು ಅವನಿಗೆ **ಯೋಗ** ವನ್ನು ಬೋಧಿಸಿ ನತನ ವಿಷಾದವನ್ನು ಹೊರಹಾಕಿ ಅವನನ್ನು ಪುನಃ ಯುದ್ಧಕ್ಕೆ ಹುರಿಗೊಳಿಸಿದನೆಂದು ಗೀತೆಯಲ್ಲಿ ಹೇಳಲಾಗಿದೆ. ಗೀತೆಯು ಬೋಧನೆ ಪ್ರಾರಂಭವಾಗು ವದು 'ರಥ ಸ್ಥಾಪನೆ' ಯಿಂದಲೇ,

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ (೧-೨೧)

'ಅಚ್ಯುತ, ನನ್ನ '**ರಥ**' ವನ್ನು ಉಭಯ ಸೇನೆಗಳ ಮಧ್ಯದಲ್ಲಿ ನಿಲ್ಲಿಸು' ಹೀಗೆ **ರಥ ಸ್ಥಾಪನೆಯಾದ** ಮೇಲೆ ಗೀತೆಯು **ಯೋಗ** ಆರಂಭವಾಗಿ,

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ

ಸ್ಥಿತೋಽಸ್ಮಿ ಗತ ಸಂದೇಹಃ ಕರಿಷ್ಯೇ ವಚನಂ ತವ. (೧೮-೭೩)

'ಅಚ್ಯುತ ನಿನ್ನ ಅನುಗ್ರಹದಿಂದ ಮೋಹ ನಷ್ಟವಾಯಿತು.

ಸ್ಮೃತಿಯು ಉಂಟಾಯಿತು. ಸಂದೇಹ ಕಳೆದವನಾಗಿ **ಸ್ಥಿ**ತನಾಗಿರುವೆ.

ನಿನ್ನ ವಚನದಂತೆ ಮಾಡುವೆನು'

ಎನ್ನುವಲ್ಲಿ ಗೀತೋಪದೇಶ ಮುಕ್ತಾಯವಾಗುತ್ತದೆ. ನರನ '**ರಥ**' 'ಕುರು ಕ್ಷೇತ್ರ'-ಕಾರ್ಯ ಮಾಡುವ **ಕ್ಷೇತ್ರ**ದಲ್ಲಿ **ಚಲಿಸುತ್ತದೆ.** ಹೀಗೆ **ರಥ ಸ್ಥಾಪನೆ** ಮತ್ತು **ರಥ ಸಂಚಲನೆ** ಇವೆರಡರ ಮಧ್ಯದಲ್ಲಿ ಗೀತೆಯು **ಯೋಗ** ನರನಿಗೆ ನಾರಾ ಯಣ (ಕೃಷ್ಣ) ನಿಂದ ಬೋಧಿಸಲ್ಪಡುತ್ತದೆ. ಆದುದರಿಂದ ಗೀತೆಯಲ್ಲಿ ಬರುವ '**ರಥ**'ಕ್ಕೆ ವಿಶೇಷ ಅರ್ಥವಿರಲೇಬೇಕಾಗುತ್ತದೆ. ಏಕೆಂದರೆ, ರಥ ಸ್ಥಾಪನೆ ಮತ್ತು ರಥ ಸಂಚಲನೆಗಳ ಮಧ್ಯದಲ್ಲಿ ಹೇಳಲ್ಪಟ್ಟ **ಯೋಗ**ವ ರಹಸ್ಯಾತ್ಮಕ ಗುಹ್ಯ ಸ್ವರೂಪವು ಗುಹ್ಯ ಜ್ಞಾನವೇ ಆಗಿದೆ.

ರಹಸ್ಯಂ ಹಿ ಏತತ್ ಉತ್ತಮಂ (೪-೩)

ಇದಂ ಗುಹ್ಯ ತಮಂ (೯-೧)

ರಾಜವಿದ್ಯಾ ರಾಜ ಗುಹ್ಯಂ (೯-೨)

ಪರಮಂ ಗುಹ್ಯಂ (೧೧-೧)

ಇತಿ ಗುಹ್ಯತಮಂ ಶಾಸ್ತ್ರಮಿದಂ (೧೫-೨೦)

ಗುಹ್ಯಾತ್ ಗುಹ್ಯತರಂ (೧೮-೬೩)

ಸರ್ವ ಗುಹ್ಯತಮಂ (೧೮-೬೪)

ಇದಂ ಪರಮ ಗುಹ್ಯಂ (೧೮-೬೮)

ಇಮಂ ಪರಂ ಗುಹ್ಯಂ ಯೋಗಂ (೧೮-೭೫)

ಇತ್ಯಾದಿ ಮಾತುಗಳಲ್ಲಿ ವ್ಯಕ್ತವಾದ ಈ ಗುಹ್ಯ ಸ್ವರೂಪದ **ಗುಹ್ಯಜ್ಞಾನ**ವನ್ನು ಮೂಲಮಾದರಿ ಸಾಕೇತಿಕಶಾಸ್ತ್ರ ಮಾತ್ರದಿ ದಲೇ ಅರಿಯಲು ಸಾಧ್ಯ. ಇಲ್ಲದಿದ್ದರೆ ಗೀತೆಯ ಗುಹ್ಯಾರ್ಥಕ್ಕೆ ನಾವು ಎರವಾಗಬೇಕಾಗುತ್ತದೆ.

ಮಹಾಭಾರತದ ವಂದನಾ ಶ್ಲೋಕದಲ್ಲಿಯೇ, ಅದು **ನರ-ನಾರಾಯಣೀ** ಸಂಪ್ರದಾಯಕ್ಕೆ ಸೇರಿದುದು ಎಂಬುದಕ್ಕೆ ಆಧಾರವಿದೆ.

"ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ"

'ನಮಿಸಿ ನರನ, ನಾರಾಯಣನ' ಎಂದು ಆರಂಭವಾಗುವ ಮಹಾಭಾರತದ 'ಆದಿ-ಮಧ್ಯ-ಅಂತ್ಯ' ಗಳಲ್ಲಿ ಈ ನರ-ನಾರಾಯಣರ ಜೋಡಿ ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ಹರವು ಹಾಕಿದೆ.

ಸಮಸ್ತ ವೇದಾರ್ಥ ಸಾರ ಸಂಗ್ರಹಭೂತಂ
ತದರ್ಥ ವಿಜ್ಞಾನೇ ಸಮಸ್ತ ಪುರುಷಾರ್ಥಸಿದ್ಧಿಃ
—ಶಾಂಕರಭಾಷ್ಯ

ಸರ್ವೋಪನಿಷದೋ ಗಾವೋ......
......ದುಗ್ಧಂ ಗೀತಾಮೃತಂ ಮಹತ್
—ಧ್ಯಾನ ಶ್ಲೋಕ

ಸಮಸ್ತ ವೇದಾರ್ಥ ಸಾರ ಸಂಗ್ರಹಭೂತವೂ, ಎಲ್ಲ ಉಪನಿಷತ್ತುಗಳೆಂಬ ಗೋವುಗಳನ್ನು ಕರೆದು ಸಿದ್ಧವಾದ **ದುಗ್ಧ ರೂಪಾತ್ಮಕ ಗೀತಾಮೃತಕ್ಕೆ** ಕಾರಣರಾದ ಕೃಷ್ಣಾರ್ಜುನರು **ನರ-ನಾರಾಯಣರೇ** !

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ (೧೮-೭೮)

ಎಂಬ ಗೀತಾವಾಕ್ಯವು[1] ಈ ನರ-ನಾರಾಯಣರ ಅವಿಚ್ಛಿನ್ನ ಸಂಬಂಧವನ್ನು ವ್ಯಕ್ತ ಮಾಡುತ್ತದೆ. ಈ ನರ-ನಾರಾಯಣರ ಸಂಬಂಧವನ್ನು ಮಹಾಭಾರತಾಂತರ್ಗತ ನಾರಾಯಣೋಪಖ್ಯಾನದಲ್ಲಿಯೂ[2] ಕಾಣಬಹುದು. ಈ ನರ-ನಾರಾಯಣರು ತೋರಿಕೆಗೆ ಇಬ್ಬರಂತೆ ಕಂಡರೂ, "ಶಿವನೇ ಬಸವ ; ಬಸವಾ ಶಿವನೇ" ಎನ್ನುವಾಗ ಶಿವ-ಬಸವರಲ್ಲಿ ಕಾಣುವ ಅವಿಚ್ಛಿನ್ನ ಸ್ವರೂಪವೇ, ನರ-ನಾರಾಯಣರಲ್ಲೂ ಉಂಟು. ಗಿಲ್ಬರ್ಟ ಮರ್ರೆ ಪ್ರಕಾರ 'ವಾಹನ ಮೊದಲು ನಂತರ ದೇವರು' 'ಸೂತ್ರದ ಪ್ರಕಾರ ವೃಷಭ> ಬಸವ ಮೊದಲು,ನಂತರ ಶಿವನ ಕಲ್ಪನೆ.ಅದರಂತೆಯೇ ಮೊದಲು ನರ,ನಂತರ ನಾರಾಯಣ 'ವಾಹನ' ಗಳೇ ಮೂಲಧಾರಣೆಗಳಿದ್ದು, ನಂತರ ಅವುಗಳಿಗೆ ದೇವತಾ ತತ್ತ್ವ ಆರೋಪವಾದದ್ದು 'ವೃಷಭ'ದ ಮೂಲಕ ಹಲವಾರು ಪ್ರಾಚೀನ ನಾಗರೀಕತೆ-ಸಂಸ್ಕೃತಿಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಆದುದರಿಂದಲೇ "ಶಿವನೇ ಬಸವ; ಬಸವಾ ಶಿವನೇ"ಎಂದು ಹೇಳುವ ಪರಂಪರೆ ಜೀವಂತವಾಗಿದೆ.ಇದರಂತೆಯೇ"ನರನೇ

ನಾರಾಯಣ ; ನಾರಾಯಣನೇ ನರ” ಎನ್ನುವಷ್ಟು ನರ-ನಾರಾಯಣರ ಸ್ವರೂಪ ಅವಿಚ್ಛಿನ್ನವಾಗಿದೆ. ಈ ಅವಿಚ್ಛಿನ್ನ ಸ್ವರೂಪದ **ನರ-ನಾರಾಯಣರೇ** ಕೃಷ್ಣಾರ್ಜುನರಾಗಿ ಕುರುಕ್ಷೇತ್ರ ರಣರಂಗದಲ್ಲಿ **ರಥಾರೂಢ**ರಾಗಿದ್ದಾರೆ; ಗುಹ್ಯ ಜ್ಞಾನವಾದ **ಯೋಗಕ್ಕೆ** ಕಾರಣರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಗೀತೆಯು ನರನ **ರಥದ** ಆಕೃತಿ ಮೂಲವಾದರಿ ಸಾಂಕೇತಿಕ ಶಾಸ್ತ್ರದ ದೃಷ್ಟಿಯಿಂದ ಹೊಸ ಆಯಾಮಗಳನ್ನು ಪಡೆಯುತ್ತದೆ.

ಗೀತೆಯ ಪ್ರತಿ ಅಧ್ಯಾಯವನ್ನು ‘ಯೋಗ’ವೆಂದೇ ಹೇಳಲಾಗಿದೆ. **ಯೋಗ**ಕ್ಕೂ **ಯುದ್ಧ**ಕ್ಕೂ ಯಾವ ಬಾದರಾಯಣ ಸಂಬಂಧವೆಂಬ ಪ್ರಶ್ನೆ ವಸ್ತುನಿಷ್ಠ ಓದುಗರನ್ನು ಕಾಡದಿರದು. **ಯೋಗ** ಆಧ್ಯಾತ್ಮಿಕ ಪರಿಭಾಷೆ ; **ಯುದ್ಧ** ಸೈನಿಕ ಪರಿಭಾಷೆ, ಹಾಗಾದರೆ ಗೀತೆಯಲ್ಲಿ ಹೇಳಲ್ಪಡುವ ಯುದ್ಧ ಆಧ್ಯಾತ್ಮಿಕ ಪರಿಭಾಷೆಯದೇ? ಇಲ್ಲಿಯ ಯುದ್ಧ **ಯೋಗ** ಸ್ವರೂಪದ್ದು ಎನ್ನುವುದನ್ನು

‘ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ’ (೩-೪೩)

ಮಾತಿನಲ್ಲಿ ವ್ಯಕ್ತವಾಗಿದೆ. ಅದರಂತೆಯೆ ಈ **ಯೋಗವು** ಗುಹ್ಯ ಸ್ವರೂಪದ ಗುಹ್ಯಜ್ಞಾನವೆನ್ನುವುದು ;

‘ಇಮಂ ಪರಂ ಗುಹ್ಯಂ ಯೋಗಂ’ (೧೮-೭೫)

ಎಂಬ ಗೀತೆಯ ಸಮಾರೋಪಾತ್ಮಕ ಮಾತಿನಿಂದ ಖಚಿತವಾಗುತ್ತದೆ.

ನಮ್ಮ ದೇಶದ ಅಸಂಖ್ಯಾತ ಗೀತಾಭ್ಯಾಸಿಗಳಲ್ಲಿ ಒಬ್ಬರಾದ ಮಹಾತ್ಮಾಗಾಂಧೀಜಿಯವರು ಗೀತೆಯಲ್ಲಿ ಉಕ್ತವಾದ ಯುದ್ಧವು ಆಧ್ಯಾತ್ಮಿಕ ಪರಿಭಾಷೆಯದು ಎಂದು ಗ್ರಹಿಸಿದ್ದು ಕಂಡುಬರುತ್ತದೆ. ಗೀತೆಯ ಲ್ಲಿ ಅವರು ಕಂಡದ್ದು ಅನಾಸಕ್ತಯೋಗ ಮತ್ತು ಆತ್ಯಂತಿಕ ಅಹಿಂಸೆ. ಅಲ್ಲಿ ನಡೆಯುವ ಯುದ್ಧ: ‘ಸಂಗಂತ್ಯಕ್ತ್ವಾ’ ‘ನಿಸ್ಸಂಗ’ ದಲ್ಲಿ ಅಸಂಗ ‘ಶಸ್ತ್ರೇಣ’ ನಡೆಯುವ ಹೋರಾಟ. ಸಂಗದಲ್ಲಿದ್ದರೂ ನಿಸ್ಸಂಗಿ ! ಅಸಂಗವೇ ಅಲ್ಲಿಯಶಸ್ತ್ರ!! ಇವನ್ನೇ ಇನ್ನೊಂದು ಪರಿಭಾಷೆಯಲ್ಲಿ ; “ಉಂಡು ಉಪವಾಸಿ! ಬಳ್ಸಿ ಬ್ರಹ್ಮಚಾರಿ !!” ಎಂದು ಹೇಳಲಾಗುತ್ತದೆ. ಹದಿನಾರು ಸಾವಿರ ಹೆಂಡದಿರೊಡನೆ “ಬಳಕೆ” ಇದ್ದರೂ ‘ಬ್ರಹ್ಮಚಾರಿ’ ಎಂಬ ಖ್ಯಾತಿಯ ಕೃಷ್ಣನು ಹೇಳುವ ‘ಯುದ್ಧ’ ಸಾಂಕೇತಿಕವಿರಲಾರದೇ ಮತ್ತೇನಿರಬಲ್ಲುದು ? ಗೀತೆಯಲ್ಲಿ ಹೇಳಲ್ಪಡುವ ನಾನಾ ಯೋಗಗಳು ಸಾಧನಾ ಪಥಗಳು ಮತ್ತುಅನುಷ್ಠಾನ ಕ್ರಮಗಳಿಗೆ ಅರ್ಥವು ಮೂಡಬೇಕಾದರೆ ಕುರುಕ್ಷೇತ್ರದಲ್ಲಿ ಜರುಗಲಿರುವ ಯುದ್ಧವು ಸೈನಿಕರು ಕಾದಾಡುವ ವಾಚ್ಯಾರ್ಥದ ಯುದ್ಧವಲ್ಲ ; ಅದು ಯೋಗಿಗಳು ಪರಿಣತ ಶ್ರೇಷ್ಠರಾಗುವ ಸಾಂಕೇತಿಕಾರ್ಥದ ಆಧ್ಯಾತ್ಮಿಕ ಪರಿಭಾಷೆಯ ಯುದ್ಧವೇ ಆಗಿದೆ. ಈ ಗುಹ್ಯಾರ್ಥವನ್ನು ಗಮನಿಸಿದವರಲ್ಲಿ, ನನಗೆ ಗೊತ್ತಿದ್ದಂತೆ, ಮಹಾತ್ಮಾಗಾಂಧೀಜಿಯವರೇ ಮೊದಲಿಗರೆಂದು ಹೇಳಬೇಕಾಗುತ್ತದೆ.

ಮಹಾತ್ಮಾ ಗಾಂಧೀಜಿಯವರು ತಮ್ಮ ಆತ್ಮ ಚರಿತ್ರೆಯನ್ನು "My Experiments with Truth"–"ಸತ್ಯದೊಡನೆ ನನ್ನ ಪ್ರಯೋಗಗಳು" ಎಂದು ಕರೆದಲ್ಲಿ ಔಚಿತ್ಯವಿದೆ. ಪ್ರಯೋಗಕ್ಕೆ ಒಳಪಡುವ ಗಾಂಧೀಜಿ ಅವರ 'ಸತ್ಯ' ಅ–ಮೂರ್ತ' ವಿರಲಾರದು.ಅದು ಮೂರ್ತಸ್ವರೂಪದ್ದೇ ಇರಬೇಕಾಗುತ್ತದೆ. ಈ ಮೂರ್ತಸ್ವರೂಪದ ಮಾಧ್ಯಮದಿಂದ ಅ–ಕ್ಷರ ಬ್ರಹ್ಮಸಿದ್ಧಿಗಾಗಿ ಅವರು ತಡಕಾಡಿದರು. ಕ್ಷರವಾದ ಬ್ರಹ್ಮ ಸಿದ್ಧಿ ಎಂದರೆ ವೀರ್ಯದ ಒಂದು ಹನಿಯೂ ನಷ್ಟವಾಗದೇ ಸ್ತ್ರೀ(ಸತ್ಯ)ಕೂಡ ಮಾಡುವ–ನಡೆಸುವ ಸಂಭೋಗ ಸಿದ್ಧಿಯ ಪರಿಣತಿಯೇ ಈ ಅಕ್ಷರ ಬ್ರಹ್ಮ ಸಿದ್ಧಿ ಎಂಬುದು ಅವರ ಆತ್ಮ ಚರಿತ್ರೆಯನ್ನು ಅಭ್ಯಸಿಸಿದವರಿಗೆ ತಿಳಿದ ವಿಷಯವೇ ಆಗಿದೆ. ಗಾಂಧೀಜಿ ಅವರ ಈ ಅಕ್ಷರ ಬ್ರಹ್ಮ ಸಿದ್ಧಿಯ ಪ್ರೇರಣಾಶಕ್ತಿ ಭಗವದ್ಗೀತೆಯೆಂದು ಬೇರೆ ಹೇಳಬೇಕಾಗಿಲ್ಲ. ಪ್ರಾಮಾಣಿಕತನದ ಸಾಕಾರ ಮೂರ್ತಿಯಾದ ಮಹಾತ್ಮಾ ಗಾಂಧೀಜಿ ಅವರು ಶ್ರೀಮದ್ ಭಗದದ್ಗೀತೆಯನ್ನು ಅಕ್ಷರ ಬ್ರಹ್ಮ ಸಿದ್ಧಿಯ ಸಾಧನಾಗ್ರಂಥವೆಂದು ಗ್ರಹಿಸಿದ್ದು ಸರಿಯೋ ತಪ್ಪೋ ಎಂಬುದು ಸಮಸ್ಯೆಯಾಗುತ್ತದೆ. ಇಡೀ ಸಮಸ್ಯೆಯನ್ನು ಲಘುವಾಗಿ ಪರಿಗಣಿಸಿ ಗಾಂಧೀಜಿ ತಮ್ಮ ಅತಿಕಾಮಿತತನಕ್ಕೆ ಬಳಸಿಕೊಂಡ ಉಪಾಯವಿದೆಂದು ತೇಲಿಸಿ ಮಾತನಾಡುವ ಬುದ್ಧಿವಂತರು ನಮ್ಮ ನಾಡಿನಲ್ಲಿ ಕಡಿಮೆಯೇನಿಲ್ಲ. ಆದ್ದರಿಂದ ಇಡೀ ಸಮಸ್ಯೆಯನ್ನು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ,ಮೂಲಮಾದರಿ ಸಾಂಕೇತಿಕ ಶಾಸ್ತ್ರದ ಭೂಮಿಕೆಯಿಂದ ವಸ್ತುನಿಷ್ಠವಾಗಿ ಪರಿಗಣಿಸುವದು ಅವಶ್ಯವೆನ್ನಿಸುತ್ತದೆ. ಆದ್ದರಿಂದಲೇ ಗೀತೆಯ ಗುಹ್ಯಾರ್ಥವನ್ನು ಅರಿಯುವಲ್ಲಿ ಗೀತಾಮೃತ ಸುರಿಯುವದಕ್ಕೆ ಕಾರಣವಾದ **ರಥ ಸ್ಥಾಪನೆ–ರಥ ಸಂಚಲ**ನಾದಿಗಳಲ್ಲಿ ಹುದುಗಿದ ಗುಹ್ಯಾರ್ಥ, ಮತ್ತು ನರನ ರಥದ ಆಕೃತಿ ಮತ್ತು ರಥದ ಪೂರ್ವೇತಿಹಾಸ, ಅದರ ಮೂಲಮಾದರಿ ಮತ್ತು ಪ್ರೇರಣಾ ತತ್ತ್ವ ಇತ್ಯಾದಿಗಳನ್ನು ತೀವ್ರ ಆಲೋಚನೆಗೆ ಒಳಪಡಿಸುವದು ಅವಶ್ಯವೆನ್ನಿಸುತ್ತದೆ.

ಗೀತೆಯ ನರನ ರಥದ ಮೂಲಮಾದರಿ **ಕಠ** ಉಪನಿಷತ್ತಿನಲ್ಲಿದೆ. ಕಠ ಉಪನಿಷತ್ತಿಗೂ ಗೀತೆಗೂ ಕೌತುಕವನ್ನುಂಟು ಮಾಡುವಷ್ಟು ಸಾಮ್ಯತೆ ಇದೆ. 'ಕುರುಕ್ಷೇತ್ರದ ನಾಟಕೀಯ ಹಿನ್ನೆಲೆಯಲ್ಲಿ ಗೀತೆ ಆರಂಭವಾದಂತೆ, ಕಠ ಉಪನಿಷತ್ತು ವಾಜಸ್ರವನ ವಿಶ್ವಜಿತ್ ಯಜ್ಞದ ಹಿನ್ನೆಲೆಯಲ್ಲಿ ಆರಂಭವಾಗುತ್ತದೆ, ಮಹಾಭಾರತದ ಕತೆ ಗೌಣವಾಗಿ, ಗೀತೆಯ ಸಂದೇಶ ಪ್ರಾಮುಖ್ಯತೆ ಪಡೆದಂತೆ, ಕಠ ಉಪನಿಷತ್ತಿನಲ್ಲಿ 'ಯಜ್ಞ' ಗೌಣವಾಗಿ ಉಪನಿಷತ್ತಿನ ಸಾರವೇ ಪ್ರಮುಖ ವಿಷಯವಾಗುತ್ತದೆ. ಗೀತೆಯ **ನರ,** ಉಪನಿಷತ್ತಿನ **ನ–ಚೀಕೆತ** ಇವೆರಡೂ ಶಾಬ್ದಿಕ ಪ್ರತಿಮೆಗಳು ಸಮಾನಾರ್ಥಕವೇ ಆಗಿವೆ.

ಆಹಾರ ನಿದ್ರಾ ಭಯ ಮೈಥುನು ಚ  
ಸಮಾನಂ ಏತತ್ ಪಶುಭಿಃ **ನರಾಣಾಂ**

ಆಹಾರ, ನಿದ್ರಾ, ಭಯ ಮೈಥುನಾದಿ **ಇಂದ್ರೀಯ**-ಜನ್ಯ 'ಬೇಕು-ಬೇಡು'ಗಳು ಪಶುವರ್ಗಕ್ಕೂ ನರವರ್ಗಕ್ಕೂ ಸಮಾನವಾಗಿವೆ. ಎನ್ನುವಲ್ಲಿ **ನರನ** ಮನಸ್ಸು ಪ್ರಾದುರ್ಭಾವವಾಗದ ಮುನ್ನಿನ ಮನುಷ್ಯನ ಜೀವಿತದ ಹಂತವನ್ನು ನಿರ್ದೇಶಿಸುತ್ತದೆ. ಆದರಂತೆಯೇ ನ–ಚಿಕೇತ : ಅರಿಕೆಗೆ ಬಾರದವ : **ನರ.** ಈ ನರ ನಚಿಕೇತ ಇಬ್ಬರೂ ಮೃತ್ಯು ತತ್ತ್ವಕ್ಕೆ ಶರಣು ಹೋಗಿದ್ದಾರೆ. ನಚಿಕೇತನಂತೂ 'ಮೃತ್ಯು'ವಿನ ಕಡೆಗೆ ಹೋಗಿದ್ದಾನೆ. ನರನು,

ಕಾಲಃ ಅಸ್ಮಿ ಲೋಕಕ್ಷಯಕೃತ್ ಪ್ರವೃದ್ಧಃ
ಲೋಕಾನ್ ಸಮಾಹರ್ತುಂ ಇಹ ಪ್ರವೃತ್ತಃ (೧೧–೩೨)

ಎಂದು ಹೇಳುವ ಲೋಕ ಸಂಹಾರಕ್ಕಾಗಿ ಬೆಳೆದು ನಿಂತ ಕಾಲ: ಮೃತ್ಯುವಿನತ್ತ ಶರಣು ಹೋಗಿದ್ದಾನೆ. ಈ ಎರಡೂ ಕೃತಿಗಳಲ್ಲಿ ಮೃತ್ಯು ತತ್ತ್ವವನ್ನು ಕುರಿತ ಚಿಂತನೆಯೇ ಮೂಲಭೂತ ವಿಷಯವಾಗಿದೆ.

ಕೆಲವು ಮೂಲಭೂತ **ಧಾರಣೆ**ಗಳನ್ನು ಕುರಿತು ಕಠ ಉಪನಿಷತ್ತಿಗೂ, ಗೀತೆಗೂ ಅಸಾಮಾನ್ಯ ಸಾಮಾನ್ಯತೆಯು ಕಂಡುಬರುತ್ತದೆ. **ಕಠ ಉಪನಿಷತ್ತಿನ,**

೧ ಹರ ವೈವಸ್ವತೋದಕಂ[3] (೧–೭)
೨ ಏತದ್ಧೇವಾಕ್ಷರಂ ಬ್ರಹ್ಮ (೨–೧೬)
೩ ನ ಹನ್ಯತೇ ಹನ್ಯಮಾನೇ ಶರೀರೇ (೨–೧೮)
೪ ನಾಯಂ ಹಂತಿ ನ ಹನ್ಯತೇ (೨–೧೯)
೫ ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ (೩–೪)
೬ ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥ ಸನಾತನಃ (೬–೧)
೭ ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯ ಧಾರಣಂ (೬–೧೧) ಇವುಗಳೊಂದಿಗೆ, **ಗೀತೆಯ**

೧ ಇಮಂ ವಿವಸ್ವತೇ ಯೋಗಂ[3] ಪ್ರೋಕ್ತವಾನ್ (೪–೧)
೨ ಅಕ್ಷರಂ ಬ್ರಹ್ಮ ಪರಮಂ (೮–೩)
೩ ನ ಹನ್ಯತೇ ಹನ್ಯಮಾನೇ ಶರೀರೇ (೨–೨೦)
೪ ನಾಯಂ ಹಂತಿ ನ ಹನ್ಯತೆ (೨–೧೯)
೫ ಯದಾ ಸಂಹರತೇ ಚ ಅಯಂ ಕೂರ್ಮೋಽಂಗಾನೀವ ಸರ್ವಶಃ
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ (೨–೫೮)
೬ ಊರ್ಧ್ವ ಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಂ (೧೫–೧)
೭ ತಾನಿ ಸರ್ವಾಣೀ ಸಂಯಮ್ಯ ಯುಕ್ತ ಆಸೀತ್ (೨–೬೧)

ಇತ್ಯಾದಿ ವಿಪುಲವಾಗಿ ಸಿಗುವ ಉಲ್ಲೇಖಗಳನ್ನು ಸ್ಥೂಲವಾಗಿಯೂ ಸೂಕ್ಷ್ಮವಾಗಿಯೂ ವಿವೇಚನೆ ಮಾಡಿದಲ್ಲಿ, ಕಠ ಉಪನಿಷತ್ತನ್ನು ಗೀತೆಯಲ್ಲಿ ಭಟ್ಟಿ ಇಳಿಸಲಾಗಿದ್ದುದು ಕಂಡುಬರುತ್ತದೆ. ಇಷ್ಟೆಲ್ಲ ಸಾಮ್ಯತೆಯಿರುವ ಗೀತಾ ಪೂರ್ವದ ಕಠ ಉಪನಿಷತ್ತಿನಲ್ಲಿ ಗೀತೆಯಲ್ಲಿ ಚಿತ್ರಿತವಾದ 'ರಥ' ದ ಮೂಲಮಾದರಿಯೂ ಇರಬೇಕಲ್ಲವೇ ? ಅದೂ ಇದೆ.

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ (ಕಠ ೩-೩)

ಶರೀರ ರಥ; ಆತ್ಮ ರಥಿಕ; ಬುದ್ಧಿ ಸಾರಥಿ ಎಂಬ ಪ್ರತಿಮಾ ಸಂವಿಧಾನ ಶಿಲ್ಪ ಕಠ ಉಪನಿಷತ್ತಿನ ಕೊಡುಗೆ. ಗೀತಾಚಾರ್ಯ ಉಪನಿಷತ್ತುಗಳೆಂಬ ಗೋವುಗಳನ್ನು ಕರೆದು ಗೀತೆಯ ಸಾರವನ್ನು ನಿರ್ಮಿಸುವಾಗ ಕಠ ಉಪನಿಷತ್ತಿನ ಈ ಪ್ರತಿಮಾ ಸಂವಿಧಾನ ಶಿಲ್ಪವನ್ನು ಎರವಲು ಪಡೆದಿದ್ದಾನೆ. 'ಇಂದ್ರಿಯಾಣಿ ಹಯಾನಿ ಆಹುಃ ಶರೀರಂ ರಥ ಮೇವ ತು' ಎನ್ನುವಲ್ಲಿ ಈ ಮೂಲಮಾದರಿ ತೋರುತ್ತದೆ. ರಥವನ್ನು ಹತ್ತಿದ ಮೇಲೆ 'ಯುದ್ಧ' ವನ್ನು ಮುಗಿಸಿಯೇ ಕೆಳಗಿಳಿದ ನಾರಾಯಣನು ನರನ ಸಾರಥಿ. ಇಲ್ಲಿ ಸಾರಥಿ ನರನ ರಥದ ಅವಿಭಾಜ್ಯ ಅಂಗ. ಸಾಂಕೇತಿಕವಾಗಿ ಇಲ್ಲಿ ನರನೇ ರಥ; ನಾರಾಯಣನೇ ಸಾರಥಿ.

"ಶರೀರಂ ರಥಮೇವ ತು"

ಎನ್ನುವಲ್ಲಿ ನರನ ಶರೀರವು ರಥವಾದರೆ ಅವನ ಶರೀರದ ಅಂಗವೊಂದು, ಸಾರಥಿಯಾಯಿತು. ಕಠ ಉಪನಿಷತ್ತಿನಲ್ಲಿ ಶರೀರ ರಥ, ಆತ್ಮಾ ರಥಿಕ; ಬುದ್ಧಿ ಸಾರಥಿ. ಅದೇ ಪ್ರತಿಮಾ ಶಿಲ್ಪ ಗೀತೆಯಲ್ಲೂ ಇದೆ. ನರ ಶರೀರ ರಥ; ನರನ ಆತ್ಮಾ ರಥಿಕ, ನಾರಾಯಣ ಸಾರಥಿ. ಕಠ ಉಪನಿಷತ್ತಿನ ಬುದ್ಧಿ, ಗೀತೆಯಲ್ಲಿ 'ನಾರಾಯಣ' ಸ್ವರೂಪವಾಗಿದೆ. ಆದ್ದರಿಂದಲೇ ಆವನು ನರನಿಗೆ

'ಬುದ್ಧಿಯೊಗಂ ದದಾಮಿ' (೧೦-೧೦)
'ಬುದ್ಧಿಯೋಗವನ್ನು ಕೊಡುತ್ತೇನೆ'

ಎಂದು ಹೇಳುವಲ್ಲಿ ನಾರಾಯಣನು ಬುದ್ಧಿ ಸ್ವರೂಪನಿದ್ದುದು ಕಂಡು ಬರುತ್ತದೆ. ಹೀಗೆ ಕಠ ಉಪನಿಷತ್ತಿನ ಪ್ರತಿಮಾ ಶಿಲ್ಪ ಗೀತೆಯಲ್ಲಿ ಹರಿದು ಬಂದಿದೆ.

ನರನ ಆತ್ಮಾ ರಥಿಕ: ನಾರಾಯಣ ನರನ ಸಾರಥಿ. ಹಾಗಾದರೆ 'ಆತ್ಮಾ' ಎಂದರೇನು ? ರಥಿಕನಿಗೂ ಸಾರಥಿಗೂ ಇರುವ ಸಂಬಂಧವೇನು ? ಅದರಂತೆಯೇ ನರನ 'ಆತ್ಮಾ' ನಿಗೂ 'ನಾರಾಯಣ'ನಿಗೂ ಇರುವ ಸಂಬಂಧವೇನು ? 'ಆತ್ಮ–ಜ'

ಶಬ್ದ ಪ್ರತಿಮೆಯಿಂದ 'ಆತ್ಮಾ' ಪದದ ಅರ್ಥ ತೋರಲಿದೆ. ಆತ್ಮ-ಜ ಎಂದರೆ ಮಗ. ಆತ್ಮದಿಂದ ಮಗ ಜನಿಸುತ್ತಾನೆಂದ ಮೇಲೆ 'ಆತ್ಮ' ರೇತವೇ ಆಯ್ತು. ಪ್ರಶ್ನ ಉಪನಿಷತ್ತಿನ

ಆತ್ಮನ ಏಷ ಪ್ರಾಣೋ ಜಾಯಂತ (೩-೩)

'ಆತ್ಮನಿಂದ ಈ ಪ್ರಾಣನು ಹುಟ್ಟುತ್ತಾನೆ' ; ಪ್ರಾಣವನ್ನು ಸೃಜಿಸುವ ಶಕ್ತಿ ವೀರ್ಯ : ರೇತಕ್ಕಲ್ಲದೇ ಮತ್ತಾವುದಕ್ಕಿದೆ? ಈ ಆತ್ಮನೇ ಗರ್ಭದಲ್ಲಿ ಸಂಚರಿಸಿ ಪ್ರಾಣ ವಾಗಿ ಹುಟ್ಟುವುದನ್ನು ಅದೇ ಉಪನಿಷತ್ತಿನ

ಪ್ರಜಾಪತಿಶ್ಚರಸಿ ಗರ್ಭೇತ್ವಮೇವ ಪ್ರತಿಜಾಯಸೇ
'ಪ್ರಜಾಪತಿಯಾಗಿ ಗರ್ಭದಲ್ಲಿ ಸಂಚರಿಸುತ್ತಿ (ಪ್ರಾಣವಾಗಿ) ಹುಟ್ಟುತ್ತಿ

ಎಂಬ ಮಾತೂ ಆತ್ಮಾ[4] ಎಂದರೆ ರೇತವೆಂದೇ ಸ್ಪಷ್ಟೀಕರಿಸುತ್ತದೆ.

'ಪ್ರಾಣೋ ವಾ ಅಂಗಾನಾಂ ರಸಃ'

ಪ್ರಾಣವು ಅಂಗರಸ(ವೀರ್ಯ)ವಾಗಿದೆ ಎನ್ನುವ ಉಪನಿಷತ್ತಿನ ಇನ್ನೊಂದು ಪ್ರಮಾಣವು ಈ ಮಾತಿಗೆ ಪುಷ್ಟಿಕೊಡುತ್ತದೆ. ನರನ 'ಆತ್ಮಾ' ಎನ್ನಿಸುವ ರೇತವನ್ನು ಹೊರಚೆಲ್ಲುವ, ನರನ ರಥದ ಅವಿಭಾಜ್ಯ ಅಂಗವಾದ ಸಾರಥಿ ಅಂದರೆ, ರಥರೂಪೀ ನರನ ಶರೀರದ ಅಂಗವಾದ **ಲಿಂಗವೇ** ನಾರಾಯಣರೂಪೀ ಸಾರಥಿಯಾಯ್ತು. ನರ, ಶರೀರವೆಂಬ ರಥ ; ರೇತ ಆತ್ಮನೆಂಬ ರಥಿಕ : ನಾರಾಯಣ ಲಿಂಗವೆಂಬ ಸಾರಥಿ, ಈ ಗುಹ್ಯಾರ್ಥವನ್ನು ಗ್ರಹಿಸುವಲ್ಲಿ ನಾರಾಯಣ ಪದದ ರೂಪನಿಷ್ಪತ್ತಿಯೂ ಸಹಾಯಕವಾಗಲಿದೆ.

ಆಪೋ ನಾರಾಃ ಇತಿ ಪ್ರೋಕ್ತಾ :
ಆಪೋ ವೈ ನರ ಸೂನವಃ

ನಾರಾ ಎಂದರೆ ಸೃಜನ ಸಾಮರ್ಥ್ಯದ ದಿವ್ಯ ನೀರು. ನಾರ[5] ಅಯನ ಅಂದರೆ ಈ ಸೃಜನ ಜಲ ಹರಿಯುವ ಅರ್ಥಾತ್ ಸುರಿಯುವ ಸಾಧನ. ಆದುದರಿಂದ ನಾರಾ ಯಣ ಎಂದರೆ **ಲಿಂಗ**ವೆಂದೇ ಅರ್ಥೈಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕುರು ಕ್ಷೇತ್ರದ ಯುದ್ಧ ಸಾಂಕೇತಿಕವಾಗುವುದು ಅನಿವಾರ್ಯವಾಗುತ್ತದೆ. ಕುರುಕ್ಷೇತ್ರವೇ ಇಲ್ಲಿ ಸ್ತ್ರೀ ಪ್ರತೀಕವಾಗುತ್ತದೆ.

ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ (೩-೪೩)

ಇಲ್ಲಿ ಶತ್ರುವನ್ನು ಕಾಮರೂಪಕ್ಕೆ ಸಮೀಕರಿಸಿರುವುದರಿಂದ, ಕುರುಕ್ಷೇತ್ರ ಕ್ಷೇತ್ರವಾಗಿ, ನರನ ಸಾರಥಿಯಾದ ನಾರಾಯಣ ಅಸ್ವಯಂವೇದ್ಯ ಕ್ಷೇತ್ರಜ್ಞನಾಗು ತ್ತಾನೆ.

..... ಸಂಜಾಯಂತೇ .... ಸ್ಥಾವರ ಜಂಗಮಂ
ಕ್ಷೇತ್ರ–ಕ್ಷೇತ್ರಜ್ಞ ಸಂಯೋಗಾತ್ (೧೩–೨೬)

ಕ್ಷೇತ್ರ-ಕ್ಷೇತ್ರಜ್ಞರ ಸಂಯೋಗದಿಂದ ಸ್ಥಾವರ ಜಂಗಮಗಳು ಹುಟ್ಟುತ್ತವೆ ಎಂದ ಮೇಲೆ, ಈ ಕುರುಕ್ಷೇತ್ರದ ಯುದ್ಧ ಯಾವ ಭೂಮಿಕೆಗೆ ಹೋಗುತ್ತದೆ ಎಂಬುದನ್ನು ಪ್ರಾಜ್ಞ ಓದುಗರೇ ನಿರ್ಧರಿಸಬೇಕು.

ಇಷ್ಟು ಮೌಲಿಕವಾದ ರಥ ಮತ್ತು ಸಾರಥಿ ರೂಪಕದ ಮೂಲಮಾದರಿ ಗೀತೆಗಿಂತಲೂ ಪೂರ್ವದ ಕಠ ಉಪನಿಷತ್ತಿನಲ್ಲಿತ್ತು. ಅದನ್ನೇ ವೇದವ್ಯಾಸರು ನರ-ನಾರಾಯಣರ ಮೂಲಕ ಕುರುಕ್ಷೇತ್ರದ ಸಂದರ್ಭದಲ್ಲಿ ಅಳವಡಿಸಿದ್ದಾರೆ. ಗೀತೆ ಮತ್ತು ಕಠ ಉಪನಿಷತ್ತುಗಳಿಗಿಂತ ಪೂರ್ವದ ಋಗ್ವೇದದಲ್ಲಿಯೂ ಈ ರಥ ತತ್ತ್ವದ ಮೂಲಮಾದರಿಗಳು ಕಾಣಸಿಕ್ಕುತ್ತವೆ. ವೇದದಲ್ಲಿ ರಥವನ್ನು ಸಾಂಕೇತಿಕವಾಗಿ ಶರೀರಕ್ಕೆ' ಪರ್ಯಾಯವಾಗಿ ಲಿಂಗಕ್ಕೆ ಸಮೀಕರಿಸಿದ ಉಲ್ಲೇಖಗಳು ಸಿಕ್ಕುತ್ತವೆ. ವೇದದಲ್ಲಿ 'ರಥ, ಶಬ್ದದ ರೂಪನಿಷ್ಪತ್ತಿಯು ಗತ್ಯರ್ಥಕ 'ಋ'ಆಖ್ಯಾತದಿಂದ ಇಲ್ಲವೇ ಗತಿ:ವೇಗವೆಂದು ಅರ್ಥಕೊಡುವ 'ರಂಹ' ಧಾತುವಿನಿಂದ ಸಾಧಿತವಾಗಿದೆಯೆಂದು ಹೇಳಲಾಗುತ್ತದೆ. ಶ್ವಾಸ-ಉಚ್ಛ್ವಾಸದ ಗತಿಗೆ ಒಳಪಟ್ಟ ಶರೀರವೂ ಒಂದು ರಥವೇ ಆಗಿದೆ. ಜಾನಪದ ಸಾಹಿತ್ಯದಲ್ಲೂ ರಥ(: ತೇರು)ವನ್ನು ಶರೀರಕ್ಕೆ ಸಮೀಕರಿಸಿ ಹೇಳುವ ಪರಿಪಾಠವೂ ಉಂಟು.

**ತೇರು**

ಬ್ರಹ್ಮ[6] ಬಡಿಗ್ಯಾ ಮಾಡಿದ ತೇರಾ
ನೋಡೂನ ಬಾ ಬಾ ॥ಪ॥
ಒಂಬತ್ತು ಕಾನೆ ಕಳಸವ ಹಚ್ಚಿ
ಪಂಚಸೂತ್ರ ಬಿಗದಾರ ಗಚ್ಚಿ
ಮನ ಎಂಬುವ ಹಗ್ಗವ ಹಚ್ಚಿ
ಜಗ್ಗಿ ಹಿಡಿಯೋ ಕೈಯಲಿ ಗಚ್ಚಿ ॥

ನಾಲ್ಕು ವೇದ ಗಾಲಿಯನೆಸಗಿ
ನಡಸತಾನ ವಾಯುಸುತಾ
ಆತ್ಮಾರಾಮ ಅಂತರ ಕುಂತಾ
ಚಿತ್ರಗುಪ್ತ ಮುಂದೆ ನಿಂತಾ ॥
ಸಂಬ ಸದಾಶಿವ ಗಂಗಾಧರಾ
ತಾನೇ ಆದಾನಾ ತೇರಿನ ಅಧಿಕಾರಾ ॥

ಯುಂಕಂಚಿ ರಾಮಚಂದ್ರ
ಗುರು ಗಿರಿಮಲ್ಲೇಶನ ಪುತ್ರಾ
ಕವಿ ಮಾಡಿ ಹೇಳಿದ ಪೂರಾ
ತಾನೇ ತೇರಿನ ಮಜಕೂರಾ

—ಚಾಪ ಹಾಕತಿನಿ ಡಪ್ಪಿನ ಮ್ಯಾಲ[7]

ಪ್ರಸ್ತುತ ಲಾವಣಿಯಲ್ಲಿ ಒಂಬತ್ತು ಕಾನೆಗಳಿಂದೊಡಗೂಡಿದ ತೇರು ನರ ಶರೀರವೆಂದು ಬೇರೆ ಹೇಳಬೇಕಾಗಿಲ್ಲ. 'ನಾಲ್ಕು ವೇದ ಗಾಲಿಯುವೆಽಗಿ' ಎನ್ನುವಲ್ಲಿ ನಾಲ್ಕು ವೇದಗಳಿಂದ ರಚಿತವಾದ ಗಾಲಿ ಒಂದೇ ಎಾದು ಕಂಡು ಬರುತ್ತದೆ. ಸ್ಥೂಲ ವಾಗಿ, ಇದು ವೇದದ 'ಏಕಚಕ್ರರಥ' ವನ್ನು ಹೋಲುತ್ತದೆ. ಇಲ್ಲಿ ನಾಲ್ಕು ವೇದಗಳು ಕೂಡಿ ಒಂದೇ ಗಾಲಿಯಾಗಿದ್ದರೆ ವೇದದಲ್ಲಿ ಏಳು ಹೆಸರುಗಳಿಂದ ಕರೆಯಲ್ಪಡುವ ಒಂದೇ ಕಂದುರೆ ಏಕಚಕ್ರರಥವನ್ನು ಎಳೆಯುತ್ತದೆ.

ಸಪ್ತ ಯುಂಜಂತಿ ರಥಂ ಏಕಚಕ್ರಂ ಏಕ ಅಶ್ವಃ ವಹತಿ ಸಪ್ತನಾಮಾ

(೧-೧೬೪-೨)

ಇಲ್ಲಿ ವರ್ಣಿತದಾದ ಆದಿತ್ಯನ ರಥ ಶರೀರವೆಂದೂ,ಅಶ್ವವು ಲಿಂಗ ಶಕ್ತಿ(ಆತ್ಮಾ ರಾಮ)[8] ಯೆಂದೂ ಸಂಕೇತಿಸಲ್ಪಟ್ಟಿದೆ.

ಹರದೇಶಿ ಅವರ ತೇರು ಲಾವಣಿಗೆ ತೋಡಿಯಾಗಿ ಬರುವ ನಾಗೇಶಿ ಅವರ ಹಾಡು ರಥದ ಸ್ವರೂಪವನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ.

### ತೇರು

ತೇರ ಸಾಗಿತವ್ವಾ ತಂಗಿ
ನೋಡೂನ ಬಾ ಬಾ ॥ಪ॥
ಚಿತ್ತ ಎಂಬೂದ ತೇರಿನ ಗಾಲಿ
ವಾಸರ್ಬ್ದಿಡಿಯವ್ವ ಕೈಲಿ
ಜೋಕೆಯಿಂದ ಕುಂತಾನ ಮ್ಯಾಲಿ
ತೇರ ಹೋತಾ ಮಣಿಪುರದಲ್ಲಿ[9]
.........................
.........................
ಆಶೆ ಅಂಬೂದ ಹಗ್ಗ ಹಚ್ಚಿ
ಬೇಸಿ ಮಾಡಿ ಹಿಡಿಯಂವ್ವ ಗಚ್ಚಿ
ಕಳಸ ಅಂಬೂದ ಕೂನ ಇಟ್ಟೀ ![10]
ತೇರ ಆತ ಮಾರಾಬಟ್ಟಿ !!

ದೇಶಕ ಕಾಸೆ ಶಾಹೀರೆ
ನಮ್ಮ ಬಾಳಗೇರಿ ಊರ
ಗುಪ್ತಹಾನ ಬಸವೇಶ್ವರಾs
ಸಾತಯ್ಯ ಸ್ವಾಮಿಃ ತಿಳಿದಾವ ಸೂತ್ರ
—ಚಾವ ಹಾಕತೀನಿ ಡಪ್ಪಿನ ಮ್ಯಾಲ

ಹರದೇಶಿ ಅವರ ತೇರು ಮನೋನಿಗ್ರಹದ ತೇರು. ಅದಕ್ಕೆ ಯೋಗೇಶ್ವರ ಗಂಗಾಧರ ಅಧಿಕಾರಿ. ಆದರೆ ಈ ಪುರುಷನ ತೇರು ಪ್ರಕೃತಿಯ ಸಾನಿಧ್ಯದಲ್ಲಿ ಚಂಚಲಚಿತ್ತವಾಗಿ 'ಮೂರಾಬಟ್ಟೆ'ಯಾಗುವುದನ್ನು ನಾಗೇಶಿಯವರು ಚಿತ್ರಿಸಿದ್ದಾರೆ. ನಾಗೇಶಿ ಅವರ ಹಾಡು ಲೈಂಗಿಕ ಕ್ರಿಯೆಯಲ್ಲಿ ಪುರುಷನ ತೇರು ಪ್ರಕೃತಿಯ ಮಣಿ ಪುರದಲ್ಲಿ ಹಿಂದಕ್ಕೆ 'ಕೂನ' (ಗುರುತು) ಉಳಿಯದಂತೆ ಮೀಳಾಗಿ 'ಮೂರಾಬಟ್ಟೆ' ಯಾಗುವುದನ್ನು ಮನೋಜ್ಞವಾಗಿ ಚಿತ್ರಿಸುತ್ತದೆ.

ತೇರು : ರಥ ಪುರುಷನ ಲಿಂಗ ಪ್ರತೀಕವಾದದ್ದು, ವೇದದಲ್ಲಿ ಕಕ್ಷಿವಂತನ ಪುತ್ರಿಯಾದ ಘೋಷಾ''ಎಂಬ ಬ್ರಹ್ಮವಾದಿನಿಯ ಸಂದರ್ಭದಲ್ಲಿ ಎಂದು ಕಂಡುಬರುತ್ತದೆ, ತೊನ್ನುರೋಗ ಪೀಡಿತಳಾದ ಘೋಷಾ ಪತಿಯಿಂದ ಪರಿತ್ಯಕ್ತಳಾಗಿ ಪುತ್ರ ರಹಿತಳಾಗಿ ತನ್ನ ಆಯುಷ್ಯ ವ್ಯರ್ಥವಾಯಿತೆಂದು ಪರಿತಪಿಸುತ್ತಾಳೆ. 'ವೃಷಣಾ'– ಕಾಮಶಕ್ತಿ ಅಭಿವರ್ಧಕರೆಂದು ಕರೆಯಿಸಿಕೊಳ್ಳುವ ಮತ್ತು ಶುಭಸ್ಪತಿ (ಶುಭ> ಶುಭ್ರ> ಶುಕ್ಲ : ರೇತ)ಗಳೆಂದು ಪ್ರಸಿದ್ಧರಾದ ಅಶ್ವಿನಿ ದೇವತೆಗಳನ್ನು ಸಂಪ್ರೀತಗೊಳಿಸಿ ಅವಳು ಸೌಭಾಗ್ಯವನ್ನು ಕೇಳಿಕೊಂಡಾಗ, ಅಶ್ವಿನಿ ದೇವತೆಗಳು ತಾವೇ ಸೌಭಾಗ್ಯರೂಪವನ್ನು ಹೊಂದಿ ಅವಳ ಇಷ್ಟಾರ್ಥವನ್ನು ಪೂರೈಸಿ 'ಸುಹಸ್ತ್ಯ' ನೆಂಬ ಪುತ್ರನನ್ನು ಪ್ರದಾನ ಮಾಡಿದರೆಂದು ಹೇಳಲಾಗುತ್ತದೆ. ಕೌತುಕದ ವಿಷಯ ವೇನೆಂದರೆ, ಅಶ್ವಿನಿ ದೇವತೆಗಳನ್ನು ಸುಪ್ರೀತಗೊಳಿಸಲು ಅವಳು ಹೇಳಿದ,

ಯೋ ವಾಂ ಪರಿ (೧೦-೩೯-೧)
ರಥಂ ಯಾಂತಂ (೧೦-೪೦-೧)

ಎರಡೂ ಮಂತ್ರಗಳಲ್ಲಿ ಅವಳು ನೇರವಾಗಿ ಅಶ್ವಿನಿ ದೇವತೆಗಳ ತ್ರಿಚಕ್ರರಥ : ತೇರು : ಲಿಂಗ ತನ್ನತ್ತ ಬರುವಂತೆ ಆಹ್ವಾನಿಸುತ್ತಾಳೆ.

ಸೂರ್ಯ ಪುತ್ರಿ ಸೂರ್ಯಾ ಮತ್ತು ಅಶ್ವಿನಿ ದೇವತೆಗಳ ಶರೀರ ಸಂಬಂಧದಲ್ಲಿ ಹೇಳಲಾಗುವ,

ವಾಂ ರಥಂ ಸೂರ್ಯಾ ಅತಿಷ್ಠತ್ (೫-೭೩-೫)
ವಾಜಿನವಸೂ ಯೋಷಣಾ (ಸೂರ್ಯಾ) ವಾಂ
ರಥಂ ಅತಿಷ್ಠತ್ (೮-೮-೧೦)

ಮುಂತಾದ ಋುಗ್ವೇದದ ಸೂಕ್ತಗಳಲ್ಲಿ ರಥವನ್ನು ಶರೀರಕ್ಕೂ[12] ಲಿಂಗಕ್ಕೂ ಸಮೀಕರಿಸಲಾಗಿದೆ. ವೇದದಲ್ಲಿ ಹೇಳಲ್ಪಟ್ಟ ಅ-ಚಕ್ರರಥ, ಏಕೀಷಂ ರಥ, ಏಕಚಕ್ರ ರಥ, ದ್ವಿಚಕ್ರರಥ, ತ್ರಿಚಕ್ರರಥ ಇವೆಲ್ಲವುಗಳು ಒಂದಿಲ್ಲೊಂದು ರೀತಿಯಲ್ಲಿ ಲೈಂಗಿಕ ಪ್ರತಿಮೆಗಳೇ ಆಗಿವೆ.

'ರಥ'ದ ಮೂಲಮಾದರಿ ಋುಗ್ವೇದದಿಂದ ಕಠ ಉಪನಿಷತ್ತಿಗೂ, ಕಠ ಉಪನಿಷತ್ತಿನಿಂದ ಗೀತೆಗೂ ಹರಿದು ಬಂದಿದೆ. ವಾಜಶ್ರವ, ನಚಿಕೇತ, ಯಮ ಇವರ ಸಂದರ್ಭದಲ್ಲಿ ಬರುವ ಋುಗ್ವೇದ ಸೂಕ್ತವೊಂದು ಇಂತಿದೆ.

ಯಂ ಕುಮಾರ ನವಂ ರಥಂ ಅಚಕ್ರಂ ಮನಸಾಕೃಣೋಃ
ಏಕೇಷಂ ವಿಶ್ವತಃ ಪ್ರಾಂಚಂ ಅಪಶ್ಯನ್ ಅಧಿತಿಷ್ಠಸಿ (೧೦-೧೩೫-೩)

ಇದರ ಪ್ರತಿಪದಾರ್ಥ (ಋುಗ್ವೇದ ಸಂಹಿತಾ, ಮೈಸೂರ ಅರಮನೆ ಪ್ರಕಾಶನ) ಹೀಗಿದೆ.

**ಕುಮಾರ**—ಎಲೈಕುಮಾರ ಋುಷಿಯೇ । **ಅಚಕ್ರಂ**-ಚಕ್ರರಹಿತವಾದ । **ನವಂ**—ನೂತನವಾದ । **ಏಕೇಷಂ**-ಒಂದೇ ಅಚ್ಚಿನ ಮರವುಳ್ಳದ್ದೂ (ಪ್ರಾಣ ಸಹಿತವಾದ) । **ವಿಶ್ವತಃ ಪ್ರಾಂಚಂ**-ಸರ್ವತ್ರ ಸಂಚರಿಸಬಲ್ಲ । **ಯಂ ರಥಂ**- ಶರೀರವೆಂಬ ಈ ರಥವನ್ನು । **ಮನಸಾ**-ಸಂಕಲ್ಪದಿಂದ । **ಅಕೃಣೋಃ**-ನಿರ್ಮಿಸಿಕೊಂಡಿದ್ದಿಯೋ । **ತಂ**-ಅಂತಹ ಶರೀರಾತ್ಮಕವಾದ ರಥವನ್ನು । **ಅಪಶ್ಯನ್**–ನನ್ನ ಸ್ವರೂಪವನ್ನು ತಿಳಿಯದೆ । **ಅಧಿತಿಷ್ಠಸಿ**-ಹತ್ತಿ ಕುಳಿತಿದ್ದಿಯೇ.

ಇಲ್ಲಿ ರಥದ ಸಾಂಕೇತಿಕ ಅರ್ಥ **ಶರೀರ**ವೆಂದೇ ಇದೆ. 'ಏಕೇಷಂ'-ಒಂದೇ ಅಚ್ಚು-ಈಸು, ಇದು **ಲಿಂಗ**ವೆಂದು ಬಿಚ್ಚಿ ಹೇಳಬೇಕಾಗಿಲ್ಲ.[13] ಹೀಗೆ ರಥದ ಮೂಲ ಮಾದರಿ (Archetypal symbolism) ವೇದದಿಂದ ಉಪನಿಷತ್ತಿಗೂ, ಉಪನಿಷತ್ತಿನಿಂದ ಗೀತೆಗೂ ಹರಿದು ಬಂದಿದೆ. ಜಾನಪದದಲ್ಲೂ ರಥವನ್ನು ಲೈಂಗಿಕ ಪ್ರತಿಮೆಯನ್ನಾಗಿ ಬಳಸುತ್ತಿದ್ದದ್ದನ್ನು ಕಂಡದ್ದಾಗಿದೆ.

ಶ್ರೀಮದ್ ಭಗವದ್ಗೀತೆಯಲ್ಲಿಯು ನರನ ರಥ ಮೂಲಮಾದರಿಗಳನ್ನು ಅವಲೋಕನ ಮಾಡಿದ ಮೇಲೆ, ಈ ರಥತತ್ತ್ವದ ಅಡಿಪಾಯದಲ್ಲಿ **ಲೈಂಗಿಕ** ಶಿಲ್ಪವೇ ಇದೆ. ಈ ಲೈಂಗಿಕ ಶಿಲ್ಪದ ಮೇಲೆ ಗೀತೆಯ 'ರಾಜವಿದ್ಯಾ ರಾಜಗುಹ್ಯ' ವೆನಿಸುವ **ಯೋಗತತ್ತ್ವ** ನಿಂತಿದೆ. **ರಾಜಯೋಗ**ವೆನಿಸುವ ಅ-ಕ್ಷರ **ಬ್ರಹ್ಮಸಿದ್ಧಿ**ಗಾಗಿ, ವೀರ್ಯದ ಒಂದು ಹನಿಯೂ ನಷ್ಟವಾಗದೇ ಸ್ತ್ರೀಯೊಡನೆ ನಡೆಸುವ ಸಂಭೋಗ ಸಿದ್ಧಿಯ ಪರಿಣತಿಗಾಗಿ ಮಹಾತ್ಮಾ ಗಾಂಧೀಜಿಯವರು ತಡಕಾಡಿದ್ದನ್ನು ನೋಡಿದರೆ ಗೀತೆಯ ಗುಹ್ಯಾರ್ಥವನ್ನು ಅವರು ಸರಿಯಾಗಿ ಗ್ರಹಿಸಿದ್ದರೆಂದು ಹೇಳಬೇಕಾಗುತ್ತದೆ. ಆದುದರಿಂದ ಗೀತೆಯ ಮೂಲ ಆಶಯ ಮತ್ತು ಪ್ರೇರಣಾ ತತ್ತ್ವ ಮತ್ತು ಸಾರ **ಅಕ್ಷರ ಬ್ರಹ್ಮ ಸಿದ್ಧಿಯೇ**[14] ಆಗಿದೆಯೆಂದು ಹೇಳಲಡ್ಡಿಯಿಲ್ಲ.

# ಅನುಬಂಧ

1 ಯೋಗೇಶ್ವರ ಕೃಷ್ಣನ **ಯೋಗವಿದ್ದಲ್ಲಿ** ನರ **ಧನುರ್ಧರ** (ಬಿಲ್ಲು ಸಹಿತ) ಇರಬೇಕಾಗುತ್ತದೆ. ಇಲ್ಲಿ ಬಿಲ್ಲು ಮಹತ್ವದ ಸಂಕೇತವಾಗುತ್ತದೆ. "ಅಹಂ ರುದ್ರಾಯ **ಧನುಂ** ಆತನೋಮಿ (ಋ) 'ರುದ್ರನಿಗಾಗಿ ಬಿಲ್ಲು ಹಿಗ್ಗಿಸಿಟ್ಟಿದ್ದೇನೆ' ಎನ್ನುವ ಅದಿತಿಯು **ಬಿಲ್ಲು** ಯಾವುದು ? ಗ್ರೀಕರ 'ಕುರುಕ್ಷೇತ್ರ' ಟ್ರಾಯ್ ಯುದ್ಧದ ಸಾಂಕೇತಿಕತೆಯು ಮೂಲಕ (No Second Troy) ಮಾಡಗಾನ್‌ಳನ್ನು ಕುರಿತು ಡಬ್ಲ್ಯು. ಬಿ. ಯೇಟ್ಸ್ ಹೇಳುವ A beauty like a tightened bow" ಬಿಗಿದ **ಬಿಲ್ಲಿನ(ಂಥ)** ಸುಂದರಿ (ಸೌಂದರ್ಯ) ಎಂಬಲ್ಲಿ, **ಬಿಲ್ಲಿನ** ಸಾಂಕೇತಿಕತೆ ಸ್ಪಷ್ಟವಾಗುತ್ತದೆ.

2 ನಾರಾಯಣೋಪಾಖ್ಯಾನದಲ್ಲಿ **ನರ–ನಾರಾಯಣರ** ದರ್ಶನಕ್ಕೆ **ನಾರದನು** ಹೋಗುತ್ತಾನೆ. ಈ ಮೂರೂ ಶಾಬ್ದಿಕ ಪ್ರತಿಮೆಗಳಲ್ಲಿರುವ ಅಂತಃ ಸಂಗತಿ ಚೋದ್ಯವಾಗಿದೆ. ನರ–ನಾರಾಯಣ–ನಾರದ ಈ ಮೂರೂ ಪದಗಳಲ್ಲಿರುವ **ನರ**> ನಳ ನಮ್ಮನ್ನು **ನಳ–ಧಮಯಂತಿ** ಕಥೆಗೆ ಕರೆದೊಯ್ಯುತ್ತದೆ. **ನಳ** ಲಿಂಗಶಕ್ತಿ; **ಧಮಯಂತಿ** ನಿಗ್ರಹ ಶಕ್ತಿ ಸಂಕೇತಗಳಾಗಿರುವದು ಅವುಗಳ ಅರ್ಥದಿಂದಲೇ ಸೂಚಿತವಾಗುತ್ತದೆ. ಕನಕದಾಸರ **ನಳ ಚರಿತ್ರೆ** ಸಂಪಾದಿಸಿದ ಡಾ॥ ದೇ.ಜವರೇಗೌಡರು ತಮ್ಮ ಪ್ರಸ್ತಾವನೆಯಲ್ಲಿ ನಳ–ದಮಯಂತಿ ಪ್ರಸಂಗವೇ **ಮಹಾಭಾರತದ** ವಸ್ತುವಿಗೆ ಮೂಲ ಎಂಬುದಾಗಿ ಪಂಡಿತರು ಅಭಿಪ್ರಾಯ ಪಟ್ಟುದನ್ನು ಹೇಳಿದ್ದಾರೆ. ಈ ಹಿನ್ನೆಲೆಯಲ್ಲಿ ಮಹಾಭಾರತದ ಮೂಲ ಆಶಯ ಮತ್ತು ಪ್ರೇರಣಾ ತತ್ತ್ವ ಅಕ್ಷರ ಬ್ರಹ್ಮಸಿದ್ಧಿಯ ಇಂದ್ರಿಯ ನಿಗ್ರಹವೇ ಆಗುತ್ತದೆ.

3 ವಿವಸ್ವಾನ್> ವೈವಸ್ವತ ಎಂದರೆ ಹೊಳೆ, ಪ್ರಕಾಶಿಸು. ಕಠ ಉಪನಿಷತ್ತು ವೈವಸ್ವತ: ಪ್ರಕಾಶತತ್ತ್ವವನ್ನು ಉದಕಕ್ಕೆ ಮಾರ್ಪಡಿಸಿದೆ. ಅದರಂತೆಯೇ ಗೀತೆಯಲ್ಲಿ ವೈವಸ್ವತ ಮನುವಿನ ಹೆಸರಿನಲ್ಲಿ **ಪಾಂಚರಾತ್ರ** ಸಂಪ್ರದಾಯದ ತತ್ತ್ವಪ್ರಣಾಲಿಯನ್ನು ಅಧಿಕೃತಗೊಳಿಸಲು ಪ್ರಯತ್ನಿಸಲಾಗಿದೆ.ಹೀಗೆ **ಗೀತೆ** ಮತ್ತು **ಕಠ ಉಪನಿಷತ್ತಿನಲ್ಲಿ** ವೈವಸ್ವತ ಮನುವನ್ನು ಅಪಮೌಲ್ಯ ಮಾಡಲಾಗಿದೆ.

4 ಆತ್ಮಾ ಎಂದರೆ **ರೇತ** ಇದರ ನೇರ ಸ್ಪಷ್ಟೀಕರಣ ಐತರೇಯ - ಉಪನಿಷತ್ತಿನಲ್ಲಿನ "ಹ ವೈ ಯತ್ ಏತತ್ ರೇತಃ ತಂ ಆತ್ಮಾನಂ ಆತ್ಮನೀ ಏವ ಬಿಭರ್ತಿ ಯದಾ ತತ್ ಸ್ತ್ರಿಯಾಂ ಸಿಂಚತಿ ಅಥ ಏತತ್ ಜನಯತಿ" "ಯಾವುದು **ರೇತಸ್ಸೆಂದು** ಪ್ರಸಿದ್ಧವಾಗಿದೆಯೊ ಆ **ಆತ್ಮನನ್ನು** ತನ್ನಲ್ಲಿಯೇ ಧರಿಸಿ ಯಾವಾಗ ಅದನ್ನು ಸ್ತ್ರೀಯಲ್ಲಿ ಸೇಚನ ಮಾಡುತ್ತಾನೋ (ಆಗ) ಇದನ್ನು ಉತ್ಪತ್ತಿ ಮಾಡುತ್ತಾನೆ." 'ಸಾ ಅತ್ರಗತ ಅಸ್ಯ ಏತಂ **ಆತ್ಮಾನಂ** ಭಾವ

ಯತಿ' 'ಅವಳು ಅಲ್ಲಿ (ಯೋನಿ) ಸೇರಿದ ಅವನ ಆತ್ಮ (ರೇತಸ್ಸ) ವನ್ನು ಪಾಲಿಸುತ್ತಾಳೆ. 'ಆತ್ಮಾ' ಪದದ ಅರ್ಥ ಇಷ್ಟು ಸ್ಪಷ್ಟವಿರುವಾಗ **ಆತ್ಮ ಸಾಕ್ಷಾತ್ಕಾರ** ಎಂದರೆ ಯಾವುದರ ಸಾಕ್ಷಾತ್ಕಾರ ?

5 ನಾರಾಯಣ : ನಾರ ಅಯನ. ನಾರ (ಲ)> ನಾಳ ಎಂದರೆ **ಕೊಳವೆ**. ಈ ಶಬ್ದ ಶಿಲ್ಪದ ಹಿನ್ನೆಲೆಯಲ್ಲಿ ನಾರಾಯಣವೆಂದರೆ ನೀರು (ಸೃಜನ ಜಲ) ಸುರಿಸುವ ಕೊಳವೆ ; ಲಿಂಗವೆಂದರ್ಥವಲ್ಲವೆ ?

6 ತೇರು **ಶರೀರ** ವಾದರೆ ಅದನ್ನು ನಿರ್ಮಾಣ ಮಾಡುವ ಬಡಿಗರೂಪೀ **ಬ್ರಹ್ಮ ಲಿಂಗ** ತಾನೇ ? ಈ ಹಿನ್ನೆಲೆಯಲ್ಲಿ **ಬ್ರಹ್ಮ** ರಂಧ್ರ, **ಬ್ರಹ್ಮ** ಛಿದ್ರ, **ಬ್ರಹ್ಮ ಸ್ಥಾನ** ಇತ್ಯಾದಿ ಶಬ್ದ ಶಿಲ್ಪದಲ್ಲಿ ಹುದುಗಿದ ಸಾಂಕೇತಿಕಾರ್ಥವನ್ನು ಗಮನಿಸಬೇಕು. "ಮಮ ಯೋನಿ: ಮಹತ್ **ಬ್ರಹ್ಮ** : ತಸ್ಮಿನ್ ಗರ್ಭಂ ದಧಾಮಿ.-ಗೀತಾ(೧೪-೩) ಇಲ್ಲಿ ಬ್ರಹ್ಮ **ಯೋನಿ** ! ಹಾಗಾದರೆ **ಬ್ರಹ್ಮಜ್ಞಾನ** ಎಂದರೆ ಯಾವುದರ ಜ್ಞಾನ ? ಶ್ರೀ ಬಸವ ಲಿಂಗ ಶರಣರು ಬರೆದ **ತೇರು** ಗೌಪ್ಯಾರ್ಥ ಸೂಚಕ ಎಂದು ಡಾ|| ಎಚ್. ಶಿವರುದ್ರ ಸ್ವಾಮಿ ಹೇಳುತ್ತಾರೆ. ಅದು 'ನವನೆನೆಗಳ ಕಿರೋದರ' ತೇರು ! 'ಧ**ರೆಯಾಕಾಶಕೆ ಮರ ಸೊಂಕದ**' ತೇರು. ಇದು ಬ್ರಹ್ಮ **ತುದಿ** ಕಾಣದ, ವಿಷ್ಣು **ಬುಡ** ಕಾಣದ ಸ್ತಂಭರೂಪ (ಶಿವ) **ಲಿಂಗ** ತಾನೇ ?

7 ಚಾಪಹಾಕಿವಿ ಡಪ್ಪಿನ ಮ್ಯಾಲ . ಲಾವಣಿ ಅಧ್ಯಯನ ಡಾ|| ಸಂಗಮೇಶ ಬಿರಾದಾರ ಅವರ ಕೃತಿ.

8 **ಆತ್ಮಾರಾಮ** ಧಾರಣೆ ಸಂತರಲ್ಲಿ ಮಾನ್ಯವಿದೆ. ರಮ್ ರಾಮ : ಕಪ್ಪು, ಕತ್ತಲೆ. ಆತ್ಮ (ರೇತ) ಕ್ಕೂ **ಕತ್ತಲೆಗೂ** ಸಾಹಚರ್ಯವಿದೆ. ಆತ್ಮಾರಾಮ ಎಂದರೆ **ಲೈಂಗಿಕ-ತಮಸ್ಸೆ** ! 'ಅ-ಸೂರ್ಯೇ (ಕತ್ತಲು : ತಮಸ್ಸು) ತಮಸಿ ವ್ಯಾವೃಧಾನಃ'-ಋ (೫-೩೨-೬) ಲೈಂಗಿಕ ತಮಸ್ಸಿನಲ್ಲಿ ನಿಗುರಿ ನಿಲ್ಲುವವ, ಎನ್ನುವಲ್ಲಿ **ಆತ್ಮ ರಾಮ** ಯಾರು ಎಂಬುದು ವಿದಿತವಾಗುತ್ತದೆ. 'ಯತ್ ಅ-ಸೂರ್ಯಂ ತತ್ ಅ-ಸುರಾಣಾಂ ಅಸುರತ್ವಂ' ಎಂದು ಷಡ್ವಿಂಶ ಬ್ರಾಹ್ಮಣ ಆತ್ಮಾರಾಮನ ಸ್ವಭಾವದ ಪರಿಚಯ ಮಾಡಿಸುತ್ತದೆ.

9 ವೈದ್ಯಶಾಸ್ತ್ರ (ಸುಶ್ರುತ) ದಲ್ಲಿ **ಮಣಿ** ಪದದ ಅರ್ಥ **ಲಿಂಗ**. ಮಣಿಪುರ: ಯೋನಿ. "ಮಣಿ ಪದ್ಮೇಹಂ" 'ನಾನು ಮಣಿ ಪದ್ಮ (ಯೋನಿ ?) ದಲ್ಲಿದ್ದೇನೆ' ಎಂದು ಹೇಳುವ ಟಿಬೇಟನ್ ಬೌದ್ಧ ಸಂಪ್ರದಾಯದ ಉಕ್ತಿ ಮಾರ್ಮಿಕವಿದೆ. ಮಹಾಭಾರತದ ನರ> ನಳ> ನಾಳ **ಮಣಿಪುರ** ಕ್ಕೆ ಹೋಗಿದ್ದುದು ಸಾಂಕೇತಿಕವಿದೆ. (ಅರ್ಜುನ ಚಿತ್ರಾಂಗದಾ ಪ್ರಸಂಗ)

10 ಹರದೇಶಿ ಅವರ **ತೇರಿನ** 'ಕಳಸ ಅಂಬೂದ ಕೂನ ಇಟ್ಟೇ!' ಎಂದು ನಾಗೇಶಿ ಯವರು ಪ್ರಕೃತಿಯನ್ನು ಉದ್ದೇಶಿಸಿ ಹೇಳುವಲ್ಲಿ, **ತೇರಿನ** ಕಳಸದ 'ಆದಿ-ಅಂತ್ಯ' ಕಾಣಸಿಗದಂತೆ ಮಾಡು ಎನ್ನುವ ಅರ್ಥ ಅಭಿಪ್ರೇತವಿದೆ. ಈ ಸಾಲಿನ ಅರ್ಥ

ಜೈಮಿನಿ ಉಪನಿಷತ್ತಿನ (೪-೧೨-೬) **ಆದಿತ್ಯ** ಪದದ ಅರ್ಥವನ್ನು ಧ್ವನಿಸುತ್ತಿದ ಆದಿತ್ಯ : ಅಮೃತ–ಮೃತ್ಯು; ಆದಿ–ಅಂತ್ಯ ಎರಡೂ ಸಾಹಚರ್ಯದಲ್ಲಿವೆ ! 'ಆದಿತ್ಯ 'ಆದಿ' ಪೂರ್ಣ 'ಅಂತ್ಯ' ವಾಗುವ ಯೋನಿ–ಲಿಂಗೈಕ್ಯ ಚಿತ್ರ ಇಲ್ಲಿದೆ 'ಆದಿತ್ಯಾನಾ ಅಹಂ ವಿಷ್ಣುಃ'–ಗೀತಾ (೧೦-೨೧) ಮತ್ತು ಗರ್ಭಾದಾನ ಮಂತ್ರ 'ವಿಷ್ಣು ಯೋನಿಂ ಕಲ್ಪಯತು' ಇವುಗಳ ಮೂಲಕ ಜಾನಪದರು ಗ್ರಹಿಸಿದ ತೇರಿನ ಕಳ ವಿಷ್ಣು ಸ್ವರೂಪವೇ ಆಗುತ್ತದೆ.

11 ಸ್ಕಂದ ಸ್ವಾಮಿ ಭಾಷ್ಯ.

12 ಜಾನಪದರ ಭಾಷೆಯಲ್ಲಿ 'ಶರೀರ ಸಂಬಂಧ ಬೆಳೆಸುವದಿದೆ.' ಎನ್ನು ಮಾತಿನಲ್ಲಿ ಲೈಂಗಿಕ ಸಂಬಂಧವೇ ಅಭಿಪ್ರೇತವಿದೆ.

13 'ಇಯಂ ನಾಳಿಃ ಧಮ್ಯತೇ. ಋ (೧೦–೧೩೫–೭) ಇಲ್ಲಿ ನಾಳಿ> ನಾಳ> ನಾರ (ಲ) ಎನ್ನುವಲ್ಲಿ ಕುಮಾರ ಊದುವ **ಕೊಳವೆ** ಯಾವುದು ? ಕೃಷ್ಣನ ಕೊಳಲೂದುತ್ತಾನೆ, ಇಲ್ಲಿ **ಕೊಳಲಿನ** ಸಾಂಕೇತಿಕ ಅರ್ಥವೇನು ?

14 ಗಾಂಧೀಜಿ ಆರಂಭಿಸಿದ ಅ–**ಸಹಕಾರ** ತತ್ತ್ವದ ಪ್ರೇರಣೆಯು ಮೂ ಅಮೇರಿಕೆಯ ಹೆನ್ರಿ ಥೋರೋ ಬರೆದ "Civil Disobedience" ಎಂದು ಹೇ ಲಾಗುತ್ತದೆ. ಅಕ್ಷರ ಬ್ರಹ್ಮಸಿದ್ಧಿಯು ಪರಿಣತಿಗಾಗಿ 'ಸಂಗಂತ್ಯಕ್ತ್ವಾ' ನಿಸ್ಸಂಗದ 'ಅಸಂಗ ಶಸ್ತ್ರೇಣ' ನಡೆಸುವ ಅಸಹಕಾರ ರೂಪದ ಹೋರಾಟ ಗೀತೆಯಲ್ಲಿಯೂ ಇದ ವೀರ್ಯಪಾತವಾಗದ ಸಂಭೋಗದಲ್ಲಿ ಸ್ತ್ರೀಗೆ ಪುರುಷನ ಸಹಕಾರವೇನು ? ಈ ಹೋರಾ ಟದಲ್ಲಿ ಒಂದು ಪಕ್ಷ **ಶಂಖನಾದ** ಮಾಡಬೇಕಾಗುತ್ತದೆ. ಗಾಂಧೀಜಿ ಅ–ಕ್ಷರ ಬ್ರಹ ಸಿದ್ಧಿಯ **ರಾಜಯೋಗ** ವನ್ನು ಬ್ರಿಟಿಷರ ಮೇಲೆ ಪ್ರಯೋಗಿಸಿದರೆ ? ಪ್ರಾಜ್ಞರ ವಿಚಾರಿಸಬೇಕು.

*Actuality of thought is life*

**Aristotle.**

# ಪುರುಷಸೂಕ್ತ"ದ ಓದು

ಡಾ. ಸೋಲಂಕಿ ರಾಮಮೂರ್ತಿ

ಪುರುಷಸೂಕ್ತ ಭಾರತೀಯ ಸಂಸ್ಕೃತಿಯ ಮೂಲ ಸೂತ್ರವೇ ಆಗಿದೆ. ದೇವರು, ಪ್ರಪಂಚ, ಮತ್ತು ಮಾನವ-ಈ ಮೂರು ಪರಿಕಲ್ಪನೆಗಳು ಎಲ್ಲಾ ಸಂಸ್ಕೃತಿಗಳಿಗೆ ಮೂಲಭೂತವಾದುವುಗಳಾದ್ದರಿಂದ, ಪುರುಷಸೂಕ್ತವೂ ಈ ಮೂರು ಮೂಲಭೂತ ಪರಿಕಲ್ಪನೆಯಿಂದಾಗಿ ಅತ್ಯಂತ ಮುಖ್ಯವಾಗಿದೆ.

ದೇವರು ಸಾಮಾನ್ಯವಾಗಿ ಎಲ್ಲಾ ಸಂಸ್ಕೃತಿಗಳಲ್ಲೂ ಸೃಷ್ಟಿಕರ್ತ, ಸರ್ವಶಕ್ತ, ತಂದೆ. ಸೃಷ್ಟಿಕರ್ತನಾಗಿ ದೇವರು, ನಮ್ಮನ್ನು ಮಾಡಿದವನು, ನಮ್ಮ ದಾತ, ನಮ್ಮ ತಂದೆ. ತಂದೆಯಾಗಿ ನಮ್ಮನ್ನು ಅವನು ಮಕ್ಕಳು ಮಾಡಿಕೊಂಡವನು : ಆದ್ದರಿಂದ ನಾವು ದೇವರ ಮೂರ್ತಿಗಳು ಎಂದು ಅಂದುಕೊಳ್ಳಬಹುದು–made in the image of God. ಎನ್ನಬಹುದು.

ಪುರುಷಸೂಕ್ತ ದೇವರನ್ನು ಅನಂತ ಪುರುಷನನ್ನಾಗಿ ಕಲ್ಪಿಸಿಕೊಂಡಿದೆ- ಅನಂತ ತಲೆ, ಕಣ್ಣು, ಪಾದಗಳ ಅನಂತ ಪುರುಷನವನು–ಎಲ್ಲಾ ಪ್ರಪಂಚವನ್ನು (ಭೂಮಿಯನ್ನು) ಆವರಿಸಿ ಚಾಚಿ ನಿಂತವನು :

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್॥

ಅಂದರೆ, ದೇವರು ನಮ್ಮಂತೆಯೇ ಪುರುಷನೇ, ನಮ್ಮ ಮೂರ್ತಿಯಲ್ಲೇ ಮಾಡಲ್ಪಟ್ಟವನೇ–made in the image of man; ಅಂದರೆ ಒಂದು ಮೂಲಭೂತ ವ್ಯತ್ಯಾಸವೇನಾಯಿತೆಂದರೆ ದೇವರ ಮೂರ್ತಿಗಳು ನಾವು ಎನ್ನುವುದಕ್ಕಿಂತ, ದೇವರು ನಮ್ಮ ಮೂರ್ತಿ ಎಂದ ಹಾಗಾಯಿತು ಅಲ್ಲವೇ ?

ನೋಡಿ, ಈ ಪುರುಷನು, ಎರಡನೇ ಮಂತ್ರದಂತೆ, ಎಲ್ಲವೂ ಹೌದು,ಹಿಂದೂ ಹೌದು, ಮುಂದೂ ಹೌದು, ಅಮೃತತತ್ವವೂ ಹೌದು–ಆದರೆ ನಮ್ಮಂತೆ ಅನ್ನವನ್ನು ತಿಂದು ಬೆಳೆಯುವವನೂ ಹೌದು :

ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್।
ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥

ಪುರುಷನು ಈಗ ಹೆಚ್ಚು ಮಾನವನಂತೆ, ಅವನಂತೆ ಅನ್ನ ತಿನ್ನುವವ

ನಾಗಿದ್ದಾನೆ. ಐದನೆಯ ಮಂತ್ರ ಈ ಪರಿಕಲ್ಪನೆಯನ್ನು ಮುಂದುವರಿಸುವುದನು ಗಮನಿಸುವ :

ತಸ್ಮಾ ದ್ವಿರಾಡ ಜಾಯತ ವಿರಾಜೋ ಅಧಿ ಪುರುಷಃ
ಸ ಜಾತೋ ಅತ್ಯರಿಚ್ಯತ ಪಶ್ಚಾದ್ಭೂವಿ ಮಥೊ ಪುರಃ ॥

ಅಂದರೆ "ಅನೇಕ ಪ್ರಕಾರಗಳಿಂದ ವೇರೆಯುವ ಬ್ರಹ್ಮಾಂಡವು ಆದಿಪುರುಷನಿಂದ ಉತ್ಪನ್ನವಾಯಿತು. ಈ ವಿರಾಡ್ ದೇಹವನ್ನೇ ಆಶ್ರಯಿಸಿ ದೇಹಾಭಿಮಾನಿಯಾದ ಪುರುಷನು ಕಾಣಿಸಿಕೊಂಡನು. ಚೇತನಾರೂಪದಲ್ಲಿ ಕಾಣಿಸಿಕೊಂಡ ಪುರುಷನು ತನಗಿಂತಲೂ ಬೇರೆಯಾದ 'ಪಾಂಚಭೌತಿಕ ಶರೀರಾದಿಗಳನ್ನು' ಧರಿಸಿದನು. ಅನಂತರ ಭೂಮಿಯನ್ನು ನಿರ್ಮಿಸಿದನು (ಋಗ್ವೇದ ಸಂಹಿತಾ ಮಂ ೧೦, ಅ ೭. ಸೂ ೯೦ ಪುಟ ೮೧೦ Ed. H. P. ವೆಂಕಟರಾವ್. ಶ್ರೀ ವಿನಾಯಕ ಪ್ರಿಂಟಿಂಗ್ ವರ್ಕ್ಸ್, ೧೯೫೪)

ಇಲ್ಲಿ 'ವಿರಾಟ್' "ವಿರಾಜ" ಪದಗಳಿಗೆ "ಬ್ರಹ್ಮಾಂಡ" ವೆಂದು ಸರಿಯಾಗಿ ತೋರುವ ಅರ್ಥ ಮಾಡಲಾಗಿದೆ. ಮನುವಿನಲ್ಲಿ "ವಿರಾಜ್" ಎಂದರೆ ಗಂಡಿನ ಶಕ್ತಿ (male power), ರೇತಸ್ಸು ಎನ್ನುವಂತಹ ಅರ್ಥ ಬರುತ್ತದೆ–ಏಕೆಂದರೆ ಮನುವಿನಂತೆ ಬ್ರಹ್ಮನು ಇಬ್ಭಾಗವಾಗಿ ಗಂಡು ಹೆಣ್ಣು ಆದನು. ಆಮೇಲೆ ಹೆಣ್ಣಿನಲ್ಲಿ ಗಂಡಿನ ಶಕ್ತಿಯಾದ "ವಿರಾಜ್" ಉತ್ಪತ್ತಿಮಾಡಿದನು. ಆ "ವಿರಾಜ್" ನಿಂದ ಮನು ಹುಟ್ಟಿದನು ಇತ್ಯಾದಿ. ಆಮೇಲೆ ಇಲ್ಲಿಯೇ "ಪುರಃ" ಎನ್ನುವ ಪದ ಬರುತ್ತದೆ: ಅಂದರೆ ಪುರುಷನು "ಪುರ" ವನ್ನು ಅಂದರೆ "ದೇಹ" ವನ್ನು ಸೃಷ್ಟಿಸಿದನು- "ವಿರಾಜ್" ನಿಂದ "ಬಿಂದು" ವಿನಿಂದ, ಎನ್ನುವ ಅರ್ಥ ಹೊಮ್ಮುತ್ತದೆ. ಇದರಿಂದ "ಪುರುಷ" ನೇ "ದೇಹ" ದವನು. ಅವನು "ವಿರಾಜ್" ದಿಂದ "ಬಿಂದು" ವಿನಿಂದ "ಪುರ" ವನ್ನು "ದೇಹ" ವನ್ನು ಸೃಷ್ಟಿಸಿದನು ಎನ್ನುವುದು ಸಮರ್ಥಿತವಾಗುತ್ತದೆ.

ಇಲ್ಲಿಗೆ ಪುರುಷನು ದೇಹದವನೂ, ಗಂಡೂ, ಆಗಿ, ಅನ್ನ ತಿಂದು ಬೆಳೆಯುವ ಮಾನವನಾಗಿ, ಬಿಂದುವಿನಿಂದ, ದೇಹಿಗಳನ್ನು ಹುಟ್ಟಿಸುವವನಾಗುತ್ತಾನೆ, ಅಲ್ಲವೇ? ಇದೀಗ ದೇವರೇ ಮಾನವನ ವಿಗ್ರಹ, ಮೂರ್ತಿಯಾಗಿರುವನು–God made in the image of man.

ಇನ್ನು ಮುಂದೆ ನೋಡುವ, ಈ ಪರಮ ಪುರುಷನಾದ ಮಾನವನಿಂದ ಏನು ಸೃಷ್ಟಿಯಾಗುತ್ತದೆ, ಹೇಗೆ ಸೃಷ್ಟಿಯಾಗುತ್ತದೆ. ಎನ್ನುವುದನ್ನು :

ಆರನೇ ಮಂತ್ರ ಹೇಳುತ್ತದೆ- "ಪುರುಷನ ಅಂಶಗಳಾದ ದೇವತೆಗಳು ಪುರುಷ ಸಂಜ್ಞಿತವಾದ ಹವಿಸ್ಸಿನಿಂದ ಯಜ್ಞವನ್ನೂ ನೆರವೇರಿಸಿದರು" (ಅದೇ p. ೮೩೧) "ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ" "when the gods performed the sacrifice with Purusha as the offering"– ಅಂದರೆ "ದೇವತೆಗಳು ಪುರುಷನನ್ನೇ ಬಲಿಕೊಟ್ಟರು" ಎಂದು.

ಈಗ ನಾವು ಗಮನಿಸಬೇಕಾದದ್ದೇನೆಂದರೆ. ಈ ಆದರ್ಶ ಮಾನವನೇ ಆದ ಪುರುಷನು, ಮಾನವನಂತೆ ಅನ್ನ ತಿಂದು ಬೆಳೆಯುವವನು. ಮಾನವನ ಉಪಯೋಗಕ್ಕಾಗಿ ಬಲಿಗೀಡಾಗುತ್ತಾನೆ-ಬಲಿಕೊಡುವುದು, ಯಜ್ಞಮಾಡುವುದು, ದೇವತೆಗಳನ್ನು ಸಂಪ್ರೀತಿಸಿ ವರ ಪಡೆಯುವುದಕ್ಕೇ ಅಲ್ಲವೇ ? ಎಲ್ಲಾ ಮಾನವನ ಆವಿಷ್ಕಾರಗಳು, ಯಜ್ಞದಿಂದಲೇ, ಬಲಿಯಿಂದಲೇ, ಸಂಚಯಿತವಾಗುತ್ತವೆ. ಅಲ್ಲವೇ ? ನೋಡಿ, ಮೂಲ ವೇದವಾದ ಋಗ್ವೇದವೇ ಋಕ್ಕಿನ, ಅಂದರೆ,ಯಜ್ಞಕ್ಕಾಗಿ ಹಾಡಿದ ಮಂತ್ರಗಳ ಮೂಲವೇ ಆಗಿದೆ. ಹಾಗೂ ಎರಡನೇ ವೇದವಾದ ಯಜುರ್ವೇದವು, ಯಜ್ಞವನ್ನೇ, ಬಲಿಯನ್ನೇ ವೇದವೆನ್ನುತ್ತಿದೆ. ವಿದ್ಯೆಎನ್ನುತ್ತಿದೆ,ಜ್ಞಾನವೆನ್ನುತ್ತಿದೆ,ಅಲ್ಲವೇ ? 'ಯಜ್ಞ' ಎಂಬ ಪದವೇ 'ಯುಜ್' ಧಾತುವಿನಿಂದ ಬಂದದ್ದು. 'ಯುಜ್' ಅಂದರೆ ಘರ್ಷಣೆ . ಹೀಗೆ ಘರ್ಷಣೆಯೇ, ತಿಕ್ಕಾಟವೇ ಬಾಳಿನ ಮತ್ತು ಜ್ಞಾನದ ಪರಿಕಲ್ಪನೆಯಾಗಿದೆ ನಮ್ಮ ಸಂಸ್ಕೃತಿಯಲ್ಲಿ.

ಒಂದು ವಿಶೇಷ ರೀತಿಯಲ್ಲಿ ವೇದವೆಂದರೇನೇ ಯಜ್ಞ, ಯಾಗ, ಬಲಿ, ಆಹುತಿ, ನೈವೇದ್ಯ, ಅರ್ಪಣೆ, ಅಗ್ನಿಗೆ "ಸ್ವಾಹ" ಕೊಡುವುದು, ಹವಿಸ್ಸು ಧಾನ್ಯಗಳಂತಹ "ಅನ್ನ"ವನ್ನು "ಪ್ರಾಣ"ವನ್ನು ಆಹುತಿಕೊಡುವುದು-ಇದೇ ಆಗಿದೆ. ಈ ಯಜ್ಞ ಬಲಿದಾನಗಳ ಬಾಳಿನ ಮೂಲಭೂತ ಮೌಲ್ಯಗಳನ್ನು ಗುರುತಿಸಿಯೇ ಈಶಾವಾಸ್ಯೋಪನಿಷತ್ತು "ತೇನತ್ಯಕ್ತೇನ ಭುಂಜೀತಾ" ಎನ್ನುತ್ತದೆ. ಗೀತೆ "ಪತ್ರಂ ಪುಷ್ಪಂ, ಫಲಂ, ತೋಯಂ ಯೋಮೇ ಭಕ್ತ್ಯಾಪ್ರಯಚ್ಛತಿ : ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾಮನಃ" (೯-೨೬) ಎಂದು ಬೋಧೆ ಮಾಡುತ್ತದೆ.

ಅಂದರೆ ವೇದೋಪನಿಷತ್ತು ಗೀತೆಗಳು, ರಾಮಾಯಣ ಮಹಾಭಾರತ ಪುರಾಣಗಳು ಎಲ್ಲವೂ ಇಡಿಯ ಭಾರತೀಯ ಸಂಸ್ಕೃತಿಯ ಧಾರ್ಮಿಕ ಪರಂಪರೆಯೇ. ಜೀವನವೇ ಯಜ್ಞ, ಜೀವಿ ಯಜ್ಞ ಮಾಡಿಯೇ, ಬಲಿದಾನ ಮಾಡಿಯೇ, ತನ್ನ ಜೀವವನ್ನೇ ತಾನೇ ಯಜ್ಞವಾಗಿ, ಬಲಿಯಾಗಿ ಸಮರ್ಪಿಸಿಯೇ ತನ್ನ ಜೀವನ ಸಾರ್ಥಕ್ಯ ಪಡೆಯುತ್ತಾನೆ, ಮುಕ್ತಿ ಮೋಕ್ಷಗಳನ್ನು ಸಂಪಾದಿಸುತ್ತಾನೆ ಎಂದ ಹಾಗಾಯಿತು.

ಈಗ ನೋಡಿ, "ಯಜಮಾನ" ಎನ್ನುವ ವೇದದಯಜ್ಞ ಪದ, ಹೇಗೆ ಅತ್ಯಂತ ಸಾಂಸ್ಕೃತಿಕ ಶ್ರೇಷ್ಠತೆಯುದೂ ಹಾಗೂ ಅತ್ಯಂತ ಜನಾನುರಾಗದ ಪ್ರಮುಖ ಪದ ವಿಶೇಷವೂ ಆಗಿದೆ ಎನ್ನುವುದನ್ನು. ಯಜ್ಞಾಧಿಪತಿ ಯಜಮಾನ. ಪರಮ ಶ್ರೇಷ್ಠನಾದ ಧಾರ್ಮಿಕ ಮಾನವ, ಮಾನವ ಶ್ರೇಷ್ಠನೇ: ಅದೇ ರೀತಿಯಾಗಿ ಯಜಮಾನನು ಜನಸಾಮಾನ್ಯರ ಆಡು ಮಾತಿನಲ್ಲಿ ಪುರುಷನೇ " ಏ ಯಜಮಾನ" ಎಂದು ಸಾಮಾನ್ಯವಾಗಿ ಹೆಣ್ಣು ಗಂಡನನ್ನು ಸಂಬೋಧಿಸುತ್ತಾಳೆ. ತನ್ನ ಗಂಡನನ್ನು "ನಮ್ಮ ಯಜಮಾನರು" ಎಂತಲೇ ಕರೆಯುತ್ತಾಳೆ. ನೋಡಿ "ಯಜಮಾನ" ಎಂದರೇನೇ "ಪುರುಷ" "ಗಂಡಸು" "ಗಂಡ" ಎಂದಾಗಿದೆ, ಪರಂಪರಾನುಗತವಾಗಿ ಜೀವಂತವಾಗಿದೆ.

ಇನ್ನು ವೇದವೇ ಯಜ್ಞ. ವಿದ್ಯೆಯೇ ಯಜ್ಞ, ತಿಳಿವೇ, ಅರಿವೇ ಜ್ಞಾನವೇ

ಯಜ್ಞ–ಬಲಿ, ಆಹುತಿ, ಅರ್ಪಣೆ : ಆದ್ದರಿಂದ ವೇದಮೂಲವೇ "ಯಂಜಮಾನ" "ಪುರುಷ" ಯಜ್ಞವೇ ಯಾಜಮಾನ್ಯ, ಬಲಿದಾನವೇ ಪೌರುಷ "ಗಂಡುಸಾದರೆ ನಿನ್ನ ಬಲಿಕೊಡುವಿಯೇನು ?"

ಈಗ ಈ ಬಲಿ ಮೂಲಕ್ಕನುಗುಣವಾಗಿಯೇ ಆರನೇ ಮಂತ್ರ ಆದಿಬಲಿಯನ್ನು ಕೊಳ್ಳುತ್ತದೆ–ಇಡಿಯ ಭಾರತೀಯ ಪರಂಪರೆಗೆ ಮೂಲರೂಪವಾದ arche-type ಆದ ಮೂಲ ಬಲಿಯನ್ನುಕೊಳ್ಳುತ್ತದೆ "ಪುರುಷ"ನನ್ನು ಬಲಿ ಕೊಡುತ್ತದೆ– ಹಾಗೆಯೇ "ಪುರುಷ" ಬಲಿಯನ್ನೇ ಕಾಳಿ, ದುರ್ಗೆ, ಶಕ್ತಿ ಈ ಹೆಣ್ಣು ದೇವತೆಗಳ ಆಹುತಿಯಾಗಿ ಒಂದು ಮಹಾ ಪರಂಪರೆಯನ್ನೇ ಆರಂಭಿಸುತ್ತದೆ–ಸನಾತನ ಮಾಡಿ ಬಿಡುತ್ತದೆ. ಧರ್ಮ, ನೀತಿ, ಮೌಲ್ಯ ಮಾಡಿಬಿಡುತ್ತದೆ.

ಇನ್ನು ಮುಂದಿನ ೭, ೮, ೯, ೧೦ ನೇ ಮಂತ್ರಗಳಲ್ಲಿ ಈ ಬಲಿ ಕೊಡುವ ವಿಧಿ ನಿರೂಪಿತವಾಗಿದೆ. ಆ ಬಲಿಯಿಂದ ಸೃಷ್ಟಿಯಾದ ಸೃಷ್ಟಿ ವಿಶೇಷಗಳಾದ ಜೀವ ಜಂತುಗಳ, ವೇದ ಮಂತ್ರಗಳ ಉತ್ಪತ್ತಿಯ ವಿವರಗಳಿವೆ.

ಈಗ ೧೧ ನೇ ಮಂತ್ರ ಒಂದು ವಿಶೇಷ ರೀತಿಯದಾಗಿದೆ. ಈ ಮಂತ್ರ ಒಂದೇ ಆಶ್ಚರ್ಯಕರವಾದ ರೀತಿಯಲ್ಲಿ ಪ್ರಶ್ನಾರ್ಥದ್ದಾಗಿದೆ :

ಯತ್ಪುರುಷಂ ವ್ಯದಧು : ಕತಿಧಾ ವ್ಯಕಲ್ಪಯನ್
ಮುಖಂ ಕಿಮಸ್ಯ ಕೌಬಾಹೂ ಕಾ ಊರೂ ಪಾದಾ ಉಚ್ಯೇತೇ

ಆ "ಪುರುಷ" ನನ್ನು "ಯಜ್ಞಾಹುತಿ" ಮಾಡಿದಾಗ ಆ "ಬಲಿಪಶು" ವನ್ನು ತುಂಡು ತುಂಡು ಮಾಡಿದಾಗ,ಆ ಒಂದೊಂದು ತುಂಡು "ಏನಾಯಿತು, ಏನಾಯಿತು" ಎಂದು ಕೇಳುವ ಪ್ರಶ್ನೆ ಈ ಬಲಿಯನ್ನು, ಆಹುತಿಯನ್ನು ನಮಗೆ ಪ್ರಜ್ಞೆಗೊಳಿಸುತ್ತವೆ. ಆ ಹಿಂಸಾವಿಶೇಷವನ್ನು ಮನದಟ್ಟು ಮಾಡುತ್ತಿವೆ–ಯಾವ ರೀತಿಯಲ್ಲಿ ವೇನನನ್ನು ಅವನು ನಾಸ್ತಿಕನಾದುದಕ್ಕಾಗಿ, ತುಂಡು ತುಂಡು ಮಾಡಲಾಯಿತೋ, ಆ ತುಂಡುವಿಕೆಯಿಂದಲೇ ಪೃಥನನ್ನು ಸೃಜಿಸಲಾಯಿತೋ, ಈ ಪೃಥುವಿನಿಂದಲೇ "ಪೃಥ್ವಿ"ಯೂ ಭೂಮಿಯ ೂ "ಆಯಿ" ತೋ, ಹಾಗೆಯೇ, ಯಾವ ರೀತಿಯಾಗಿ ದಧೀಚಿಯನ್ನೂ ಬಲಿಕೊಟ್ಟು ಅವನ ಬೆನ್ನು ಮೂಳೆಯಿಂದ ಶಸ್ತ್ರಾಸ್ತ್ರಗಳ ನಿರ್ಮಾಣವಾಯಿತೋ ದೇವತೆಗಳ ಜಯವಾಯಿತೋ ಹಾಗೆಯೇ-ಯಾವ ರೀತಿಯಾಗಿ ಮೊನ್ನೆ ಮೊನ್ನೆಯವರಿಗೆ ತಾಯಂದಿರು ತಮ್ಮ ಹುಟ್ಟಿದ ಮಕ್ಕಳನ್ನು ಪುರಿಜಗನ್ನಾಥನ ರಥ ಚಕ್ರಕ್ಕೆ ಬಲಿ ಕೊಡುತ್ತಿದ್ದು ದೇವರನ್ನು ಸಂಪ್ರೀತಿಗೊಳಿಸುತ್ತಿದ್ದರೋ– ಅದಕ್ಕೇ The wheel of Juggernaut ಎನ್ನುವ ಪದ ಪುಂಜ ಇಂಗ್ಲೀಷಿನಲ್ಲಿ ಅಮಾನುಷತೆಯ, ಹಿಂಸೆಯ, ಪ್ರತೀಕವಾಗಿ ಪ್ರಚಲಿತವಾಗಿದೆ, ಜೀವಂತವಾಗಿದೆ–ಅದೇ ರೀತಿಯಾಗಿ.

ಇಲ್ಲಿ ಈ ಬಲಿ, ಆಹುತಿ, ಹಿಂಸೆಯೆ ಮಾತು ಅತ್ಯಂತ ಪ್ರಮುಖವಾದದ್ದು. ಏಕೆಂದರೆ ಈ ಹಿಂಸೆಯ ಮೂಲದಲ್ಲೇ ಚಾತುರ್ವರ್ಣ್ಯಗಳು ಈ ಪುರುಷ ಬಲಿಪಶುವಿನ ತುಂಡು ತುಂಡುಗಳಾಗಿ ನಿರ್ಮಿಸಲ್ಪಟ್ಟವು–ಆದ್ದರಿಂದಲೇ ಈ ಹಿಂಸಾ ಮೂಲದ ಚಾತುರ್ವರ್ಣ ಸೃಷ್ಟಿಯೇ, ಜಾತಿಯೇ ಹಿಂಸೆಯನ್ನು ಬಿತ್ತುತ್ತದೆ. ಹಿಂಸೆಯನ್ನು ಬೆಳೆಯುತ್ತದೆ–ಹಿಂಸೆಯೇ, ಶೋಷಣೆಯೇ, ಅದರ ಅವತಾರ, ಅಭಿವ್ಯಕ್ತಿಯಾಗಿದೆ. ಮುಂದಿನ ಮಂತ್ರ ಈ ಹಿಂಸಾವಿಧಿಯನ್ನು ನಿರ್ವಹಿಸುತ್ತದೆ:

ಬ್ರಾಹ್ಮಣೋಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ
ಊರೂ ತದಸ್ಯಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ

ಅಂದರೆ ಬ್ರಾಹ್ಮಣನೇ ಪುರುಷನ ಮುಖವಾದನು. ಬಾಹುಗಳು ಕ್ಷತ್ರಿಯರಾಗಿ ಮಾಡಲ್ಪಟ್ಟವು. ಅವನ ತೊಡೆಗಳು ವೈಶ್ಯರಾದವು. ಪಾದಗಳಿಂದ ಶೂದ್ರನು ಉತ್ಪನ್ನನಾದನು–ಅಂದರೆ ಹಿಂಸೆಯ ಮೂಲವಾದ ತಾರತಮ್ಯದಲ್ಲೇ, ಮೇಲುಕೀಳುಗಳಲ್ಲೇ, ಮಾನವ ಕುಲದ ಸೃಷ್ಟಿಯಾಯಿತು ; ಅಲ್ಲಿಂದಲೇ ಆ ಕ್ಷಣದಿಂದಲೇ, ಶೋಷಣೆಯ ಗಾಥ ನಮ್ಮ ಭಾರತೀಯ ಸಂಸ್ಕೃತಿಯ ಧಾರ್ಮಿಕ ಪರಂಪರೆಯೇ ಆಯಿತು. ಪುರುಷಸೂಕ್ತ ಮುಖಕ್ಕೆ ಅತ್ಯಂತ ಶ್ರೇಷ್ಠತೆಯನ್ನು ಪಾದಕ್ಕೆ ನಿಕೃಷ್ಟತೆಯನ್ನು ಪರಿಕಲ್ಪಿಸಿಯೇ, ಇತರ ಮುಖಭಾಗದತ್ತಣ ಸೃಷ್ಟಿ ವಿಶೇಷವನ್ನು ಆಕಾಶ ಭಾಗಗಳಾಗಿಯೂ ಪಾದದ ಕಡೆಯ ಸೃಷ್ಟಿಗಳನ್ನುಭೂಮಿಯತ್ತಣ ವಿಶೇಷಗಳಾಗಿಯೂ ನಿರ್ಮಿಸುತ್ತದೆ. ಈ ತಾರತಮ್ಯವನ್ನನುಸರಿಸಿಯೇ. ಮೌಲ್ಯಮಾಪನನ್ನು ಅವಲಂಬಿಸಿಯೆ ಗೀತೆಯಲ್ಲಿ ವರ್ಣಾಶ್ರಮದ ಸೃಷ್ಟಿ ಗುಣ ಕರ್ಮದ ತಾರತಮ್ಯದ್ದೇ ಆಗಿದೆ–ಅದನು ಗಾಂಧಿಯಂತಹ ಪಾಶ್ಚಾತ್ಯ ವಿದ್ಯಾಭ್ಯಾಸದ ಪರಿಶ್ರಮವುಳ್ಳವನನ್ನೂ "ವರ್ಣಾಶ್ರಮ ವೈಜ್ಞಾನಿಕ" ಎಂದು ಹೇಳುವ ಅತ್ಯಂತ ಅವೈಜ್ಞಾನಿಕ ಧೋರಣೆಯನ್ನು ಧರ್ಮದ, ನಂಬುಗೆಯ, ಹೆಸರಿನಲ್ಲೆ ಎತ್ತಿ ಹಿಡಿಯುವಂತೆ, ಸಾರುವಂತೆ ಮಾಡಿದೆ.

ನಾವು ಮೂಲವೇದವಾದ ಋಗ್ವೇದದ ಪುರುಷಸೂಕ್ತದಲ್ಲಿ, ಗಮನಿಸಬೇಕಾದ ಮೂಲಾಂಶಗಳೇನೆಂದರೆ ಹೇಗೆ ಬಲಿ, ಆಹುತಿ,ಹಿಂಸೆಯಲ್ಲಿ ನಮ್ಮ ಸನಾತನ ಸಂಸ್ಕೃತಿ ಜನಿಸಿದೆ,ಹೇಗೆ ನಾಲ್ಕುಜಾತಿಗಳು ಈ ಹಿಂಸೆಯ ಹಂತಗಳಾಗಿ, ತಾರತಮ್ಯದ ಶೋಷಣೆಗಳಾಗಿ ಪರಿಕಲ್ಪಿಸಲ್ಪಟ್ಟು ಪರಂಪರೆಯಾಗಿಬಿಟ್ಟಿವೆ. ಭಾರತೀಯ ಸಂಸ್ಕೃತಿಯ ಜೀವನ ರೀತಿಯೇ, ನೀತಿಯೇ, ಧರ್ಮವೇ,ಪರಮಾರ್ಥವೇ ಆಗಿ ಬಿಟ್ಟಿದೆ–ಎಂಬುವು.

ಬಲಿ, ಆಹುತಿ,ಹಿಂಸೆ—ಇವು ಅನೇಕ ಪ್ರಾಚೀನ ಬುಡುಕಟ್ಟುಗಳಲ್ಲಿ,ಪ್ರಿಮಿಟಿವ್ ಕಲ್ಚರುಗಳಲ್ಲಿ ಕಂಡು ಬರುವ ವಿಶೇಷಗಳು— ನಿಜ; ಆದರೆ ಒಂದು ಕಲ್ಚರ್ ಬುಡಕಟ್ಟು ಜನಪದ ತನ್ನ ಮೂಲದ ಪ್ರಿಮಿಟಿವಿಸಂ, ಆದಿಮಾನವತೆ, ಮೀರಿ, ಮುಂದುವರಿದು ಒಂದು ನಾಗರಿಕತೆಯಾಗಿ,ಸಂಸ್ಕೃತಿಯಾಗಿ, ಸಿವಿಲಿಸೇಷನ್ನಾಗಿ, ಕಲ್ಚರ್ ಆಗಿ

ಬೆಳೆಯುಬೇಕಾಗುತ್ತದೆ; ಹಾಗಾಗದಿದ್ದರೆ ಬರ್ಬರರು ಬರ್ಬರರಾಗಿಯೇ ಉಳಿಯುತ್ತಾರೆ. ಗ್ರೀಕರ ಹಾಗೆ (ಗ್ರೀಕರೇ ಆ "ಬರ್ಬರ" ಪದದ ಕತೃಗಳು ) ಒಂದು ಸಿವಿಲಿಸೇಷನ್ನಾಗಿ, ಕಲ್ಚರ್ ಆಗಿ, ನಾಗರಿಕ ಸಂಸ್ಕೃತಿ ವಿಶೇಷವಾಗಿ ಬೆಳೆಯಲಾರರು. ಆದ್ದರಿಂದ ನಮ್ಮ ಪ್ರಾಚೀನ, ಸನಾತನ ಸಂಸ್ಕೃತಿ ಪ್ರಾಚೀನತೆಯಲ್ಲೇ ಮುಂದುವರಿದಿದ್ದಾದರೆ, ಅಂದರೆ ಪುರುಷ ಸೂಕ್ತದಲ್ಲೇ, ಗೀತೆಯಲ್ಲೇ ಸಂಗೀತವಾಗುವುದಾದರೆ, ಅಂದರೆ ಚಾತುರ್ವರ್ಣದಲ್ಲೇ, ಜಾತಿಯ ತಾರತಮ್ಯದಲ್ಲೇ, ಹಿಂಸೆ ಶೋಷಣೆಯ ಪರಿಕಲ್ಪನೆಗಳಲ್ಲೇ ನಿಂತು, ಆ ವರ್ಣಭೇದವನ್ನು, ಜಾತೀಯತೆಯನ್ನು ಜೀವನ ರೀತಿ, ನೀತಿ, ಪಾರಮಾರ್ಥವೆಂದೂ, ಧರ್ಮವೆಂದೂ ವೈಜ್ಞಾನಿಕವೆಂದೂ,, ಅರಿವೆಂದೂ, ಬದ್ಧರಾಗಿ ಪರಿಪಾಲಿಸಿಕೊಂಡು ಬರುವುದು ಬೆಳವಣಿಗೆಯ, ಮುಂದುವರಿಕೆಯ ನಾಗರಿಕ ಸಂಸ್ಕೃತಿಯ, ಮಾನವಿಯತೆಯ ಸಮತೆ, ಭ್ರಾತೃತ್ವ,–ಸ್ವಾತಂತ್ರ್ಯಗಳ ಲಕ್ಷಣವಾಗುವುದಿಲ್ಲ–ಜೀವೋನ್ಮುಖತೆಯಾಗುವುದಿಲ್ಲ. ಬದಲಿಗೆ ಪ್ರಾಚ್ಯದಲ್ಲೇ ನಿಂತು ವ್ಯವಹರಿಸ ವ, ಸನಾತನದಲ್ಲೇ ಸಂಗೀತವಾಗುವ ವಿ. ಎಸ್. ನಯಪಾಲನು ನಮ್ಮ ಸಮಕಾಲೀನ ಬರಹಗಾರರ ಬಗ್ಗೆ ಮಾತನಾಡುತ್ತಾ ಈ ನಾಡಿನ ಬಗ್ಗೆ ಹೇಳುವ "ಬರ್ಬರನಾಗರಿಕತೆಯೇ "**barbaric civilisation**" (**India : the wounded civilisation, p. 109**) ಆಗಿಬಿಡುತ್ತದೆ.

---

# ಭಗವದ್ಗೀತೆಯಲ್ಲಿ ಮನುಗಳ ಪ್ರಸ್ತಾಪ-ಒಂದು ಟಿಪ್ಪಣಿ

ವಿದ್ಯಾಲಂಕಾರ ಪ್ರೊ. ಎಸ್. ಕೆ. ರಾಮಚಂದ್ರರಾವ್

ಬಿ.ಎಂ. ಶ್ರೀ ಪ್ರತಿಷ್ಠಾನದ ಆಶ್ರಯದಲ್ಲಿ ಈ ವರ್ಷ ಶ್ರೀ ಶಂ. ಬಾ. ಜೋಶಿಯವರ ದತ್ತಿ ಉಪನ್ಯಾಸವನ್ನು ನಾನು ನೀಡುವ ಸಂದರ್ಭದಲ್ಲಿ ವೈವಸ್ವತ ಮನುವನ್ನು ಕುರಿತು ಸಾಕಷ್ಟು ದೀರ್ಘವಾಗಿ ಚರ್ಚಿಸಿದೆ. ಉಪನ್ಯಾಸದ ಸಂದರ್ಭದಲ್ಲಿ ಭಗವದ್ಗೀತೆಯ 'ವಿವಸ್ವತೇ ಯೋಗಂ ಪ್ರೋಕ್ತವಾನ್-ವಿವಸ್ವಾನ್ ಮನವೇ ಪ್ರಾಹ [೪,೧-೨] ಎಂಬ ಉಲ್ಲೇಖವನ್ನು ಎತ್ತಿಕೊಂಡು ವಿವೇಚನೆ ನಡೆಸಿದ್ದೆ. ಈಗ, ಭಗವದ್ಗೀತೆಯಲ್ಲೇ ಬರುವ ಮನುಗಳನ್ನು ಕುರಿತು ಇನ್ನೊಂದು ಉಲ್ಲೇಖವನ್ನು [೧೦-೬] ಪ್ರಸ್ತಾಪಿಸಲಿದ್ದೇನೆ.

ಈ ಉಲ್ಲೇಖದ ಸಂದರ್ಭ ಕೃಷ್ಣನು ತನ್ನ ವಿಭೂತಿಯ ಯೋಗದ ವಿವರಗಳನ್ನು ಅರ್ಜುನನಿಗೆ ಬಿತ್ತರಿಸುವುದು. 'ಮಹರ್ಷಯಃ ಸಪ್ತಪೂರ್ವೇ ಚತ್ವಾರೋ ಮನವಃ' ಇವರೆಲ್ಲರೂ ತನ್ನ ವಿಭೂತಿಗಳೇ ಎಂದೂ ತನ್ನ ಮಾನಸಪುತ್ರರೇ ಎಂದೂ, ಅವರಿಂದಲೇ ಈ ಲೋಕವೂ ಅದರೊಳಿನ ಪ್ರಜಾಸಂತತಿಯೂ ಹೊರಬಂದುವೆಂದೂ ಕೃಷ್ಣನ ಮಾತು. ಇಲ್ಲಿನ ಒಕ್ಕಣೆಯಲ್ಲಿ ಮಹರ್ಷಿಗಳಿಗಾಗಲೀ ಮನುಗಳಾಗಲೀ ಹೆಚ್ಚಿನ ಒತ್ತು ಏನೂ ಇರದು. ಆದರೆ ಅವರನ್ನೂ ನಿರ್ದೇಶಿಸುತ್ತ ವ್ಯಾಖ್ಯಾನಕಾರರು ಸೂಚಿಸಿರುವ ಬೇರೆ ಬೇರೆ ವಿವರಣೆಗಳಲ್ಲಿ ಸ್ವಾರಸ್ಯವಿದೆ.

ಸೃಷ್ಟಿಯ ಮೊದಲಲ್ಲಿ ಆಗಿಹೋದವರ ಪ್ರಸ್ತಾಪ ಇದು. ನೇರವಾಗಿ ಬ್ರಹ್ಮ ಅಥವಾ ಹಿರಣ್ಯಗರ್ಭನಿಂದಲೇ ಕಾಣಿಸಿಕೊಂಡವರು ಅವರು; 'ಮಾನಸಪುತ್ರ'ರು, ಉಳಿದ ಪ್ರಜೆಗಳಂತೆ 'ಯೋನಿಜ'ರಲ್ಲ. ಇವರಲ್ಲಿ 'ಮಹರ್ಷಯಃ ಸಪ್ತ' ಎಂಬುದು ಸ್ಪಷ್ಟವಾಗಿದೆ; ವ್ಯಾಖ್ಯಾನಕಾರರ ವಿವರಣೆಗಳಲ್ಲಿ ಅಷ್ಟಾಗಿ ಗೊಂದಲವಿರದು. ಶಂಕರಾಚಾರ್ಯರೂ ರಾಮಾನುಜಾಚಾರ್ಯರೂ ಭೃಗುವೇ ಮೊದಲಾದ ಏಳುಮಂದಿ ಮಹರ್ಷಿಗಳೆಂದಿರುವುದನ್ನು ಸಾಮಾನ್ಯವಾಗಿ ಇತರರೂ ಒಪ್ಪಿಕೊಳ್ಳುತ್ತಾರೆ, ಮಧ್ವಾಚಾರ್ಯರ ಮಟ್ಟಿಗೆ ಮರೀಚಿ, ಅತ್ರಿ, ಅಂಗಿರಸ ಮೊದಲಾದ ಏಳುಮಂದಿ ಮಹರ್ಷಿಗಳನ್ನು ಸೂಚಿಸುತ್ತ ಮಹಾಭಾರತದ ಪ್ರಮಾಣವನ್ನು [೧೨, ೩೩೫ ೨೮]ಉಲ್ಲೇಖಿಸಿದ್ದಾರೆ. ಈ ಅಭಿಪ್ರಾಯಭೇದ ಈಗ ನಮಗೆ ಪ್ರಸ್ತುತವಲ್ಲ. ಮಹರ್ಷಿಗಳ ಕೈಬಿಟ್ಟು ಮುಂದೆ ಸಾಗಿದರೆ ಜಾಡು ಕದಡುತ್ತದೆ.

ಮುಂದೆ 'ಪೂರ್ವೇ ಚತ್ವಾರೋ ಮನವಃ' ಎಂಬ ಭಾಗಕ್ಕೆ ವ್ಯಾಖ್ಯಾನಕಾರರು ಮಾಡುವ ಅರ್ಥದಲ್ಲಿ ಒಮ್ಮತವಿಲ್ಲ. ಒಂದು ವಿವರಣೆ : ಮಹರ್ಷಿಗಳು ಏಳು ಮಂದಿ, ಅವರಿಗಿಂತ ಹಿಂದಿನವರು [ತೇಭ್ಯಃ ಪೂರ್ವೇ] ನಾಲ್ವರು ಮಹರ್ಷಿಗಳು–ಸನಕ,

ಸನಂದನ, ಸನಾತನ, ಸನತ್ಕುಮಾರ. ಇವರು 'ಪೂರ್ವೇ ಚತ್ವಾರಃ' ಕೇಶವಕಾಶ್ಮೀರಿ. ಗಳ ಪ್ರಕಾರ 'ತತ್ತ್ವಪ್ರದೀಪಿಕೆ' ಮೊದಲಾದ ಟೀಕೆಗಳು ಹೀಗೆ ಹೇಳುತ್ತವೆ. ಭಾಗವತ ಪುರಾಣದ ಉಲ್ಲೇಖ[೩.೧೨.೪] ಇಲ್ಲಿ ಪ್ರಮಾಣವಾಗಿ ಬರುತ್ತದೆ. ಇನ್ನೊಂದು ವಿವರಣೆ : ಮಹರ್ಷಿಗಳು ಏಳು ಎಂದಾದ ಮೇಲೆ, ನಾಲ್ಕು ಇನ್ನೂ ಪ್ರಾಚೀನ ವಾದುವು ಎಂಬುದು ವಾಸುದೇವ, ಸಂಕರ್ಷಣ. ಪ್ರದ್ಯುಮ್ನ , ಅನಿರುದ್ಧ ಎಂಬ ನಾಲ್ಕು ವ್ಯೂಹಗಳನ್ನು ಸೂಚಿಸುವುದೆಂದು ಭಾಗವತ ಪಂಥದ ಆದಿಗ್ರಂಥ ಭಗವದ್ಗೀತೆ ಎನ್ನುವವರು, ಭಾಗವತ ಧರ್ಮದ ಈ ಕಲ್ಪನೆ ಇಲ್ಲಿ ಪ್ರಸಕ್ತವಾದುದೆಂದು ಒಪ್ಪಿಕೊಳ್ಳುತ್ತಾರೆ.ಬಾಲಗಂಗಾಧರ ತಿಲಕರ 'ಗೀತಾರಹಸ್ಯ'ದಲ್ಲೂ ಇದೇ ತಾತ್ಪರ್ಯ ಹಿಡಿಯಲಾಗಿದೆ.

ಇವೆರಡೂ ವಿವರಣೆಗಳ ಪ್ರಕಾರ 'ಮನವಃ'[ಮನುಗಳು] ಎಂಬ ಮಾತು ಬಿಡಿಯಾಗಿ ನಿಲ್ಲುತ್ತದೆ. ಮನುಗಳೆಂದರೆ ವಾಡಿಕೆಯಲ್ಲಿರುವ ಈ ಹದಿನಾಲ್ಕು ಮಂದಿ ಮನುಗಳು ಎಂದು ಗ್ರಹಿಸಬೇಕೆಂದು ಈ ವ್ಯಾಖ್ಯಾನಕಾರರ ಅಭಿಪ್ರಾಯ.ಆದರೆ, 'ಪೂರ್ವೇ ಚತ್ವಾರಃ ಮ ನವಃ' ಎಂದು ಒಟ್ಟಾಗಿ ಅರ್ಥ ಹೇಳುವವರೂ ಇದ್ದಾರೆ. ಶಂಕರಾಚಾರ್ಯರು. ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಮತ್ತು ಅವರ ಭಾಷೆಗಳನ್ನು ಅನುಸರಿಸಿರುವ ಎಲ್ಲಾ ವ್ಯಾಖ್ಯಾನಕಾರರೂ 'ನಾಲ್ವರು ಮನುಗಳು' ಎಂಬ ಅನ್ವಯವನ್ನೇ ಹಿಡಿದಿದ್ದಾರೆ. ಈ ನಾಲ್ವರು ಮನುಗಳು ಯಾರು ? ಹದಿನಾಲ್ಕು ಮನುಗಳು ಎಂದಿರುವಾಗ ನಾಲ್ವರನ್ನು ಮಾತ್ರ ಹೇಳಿರುವ ಕಾರಣವೇನು ?

ಶಂಕರಾಚಾರ್ಯರ ಪ್ರಕಾರ ನಾಲ್ವರು ಮನುಗಳೆಂದರೆ 'ಸಾವರ್ಣಾ ಇತಿ ಪ್ರಸಿದ್ಧಾಃ, ಅವರ ಭಾಷ್ಯಕ್ಕೆ ಟೀಕೆಯನ್ನು ಸಿದ್ಧಪಡಿಸಿದ ಆನಂದಗಿರಿ 'ಪ್ರಸಿದ್ಧಾಃ' ಎಂದರೆ 'ಪುರಾಣೇಷು' ಎಂದು ವಿವರಿಸಿದ್ದಾರೆ. ಆದರೆ, 'ಸಾವರ್ಣರು' ಯಾರು ಎಂದು ನಿರ್ದೇಶಿಸುವುದಿಲ್ಲ. ರಾಮಾನುಜಾಚಾರ್ಯರೂ 'ಸಾವರ್ಣಿಕಾಃ' ಎಂದೇ ಹೇಳುತ್ತಾರೆ. ಅವರ ಭಾಷ್ಯಕ್ಕೆ ಟೀಕೆಯನ್ನು ಬರೆದ ವೇದಾಂತದೇಶಿಕರು ಬ್ರಹ್ಮಸಾವರ್ಣಿ, ರುದ್ರಸಾವರ್ಣಿ. ಧರ್ಮಸಾವರ್ಣಿ, ದಕ್ಷಸಾವರ್ಣಿ ಇವರೇ ನಾಲ್ವರೆಂದು ಎಣಿಕೆ ಮಾಡಿದ್ದಾರೆ. ಆದರೆ, ಸಾವರ್ಣಿಯೆಂಬ ಮನು ಮುಂದೆ ಬರತಕ್ಕವನು; ಈಗಿನ ವೈವಸ್ವತಮನ್ವಂತರ ಮುಗಿದ ಮೇಲೆ ಎಂಟನೆಯ ಮನ್ವಂತರವನ್ನು ತೊಡಗಿಸುವವನು. ಗೀತೆಯಲ್ಲಿ 'ಪೂರ್ವೇ ಚತ್ವಾರಃ'ಎಂದರೆ 'ಹಿಂದಿನವರು' ಎಂಬ ಸ್ಪಷ್ಟವಾದ ಮಾತಿದೆಯಲ್ಲ ? ಮತ್ತೆ ಈಗಿನ ಲೋಕಕ್ಕೂ ಪ್ರಜೆಗಳಿಗೂ ಮೂಲಪುರುಷರಾದವರು ಮುಂದೆ ಬರತಕ್ಕವರಾದರೆ ಹೇಗೆ? ಈ ತೊಡಕಿಗೆ ಸಮಾಧಾನ ಅವರು ಭಾವಿಮನುಗಳಾದರೂ ಚಾಕ್ಷುಷಮನ್ವಂತರದಲ್ಲೇ [ಎಂದರೆ ಈಗಿನ ಮನ್ವಂತರಕ್ಕೆ ಹಿಂದಿನದು] ಕಾಣಿಸಿಕೊಂಡವರು, ಸಹೋತ್ಪನ್ನರು. ಬ್ರಹ್ಮಾಂಡ ಪುರಾಣದಲ್ಲಿ [ಉತ್ತರಭಾಗ ೧, ೨೩ ಮತ್ತು ೩೯-೪೪] 'ಮಹಾನುಭಾವಾಸ್ತೇ ಪೂರ್ವಂ ಜಜ್ಞಿರೇ ಚಾಕ್ಷುಷೇಂತರೇ', 'ಚತುರೋ ವೈ ಮನೂನ್ ಪುತ್ರಾನ್ ಚಾತುರ್ವರ್ಣ್ಯಕರಾನ್

ಶುಭಾನ್' ಎಂಬ ಮಾತುಗಳಿವೆ. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣ್ಯ ವಿಭಾಗಕ್ಕೆ ಮೂಲಪುರುಷರು ಎಂಬ ಕಾರಣದಿಂದ ಇವರು ಪ್ರಸಿದ್ಧಿಯೆಂದು ಈ ಪುರಾಣದ ಒಕ್ಕಣೆ.

ಮಧ್ವಾಚಾರ್ಯರೂ ವಲ್ಲಭಾಚಾರ್ಯರೂ ಇತರರೂ ನಾಲ್ವರು ಮನುಗಳೆಂದರೆ ಮೊದಲಲ್ಲಿ ಆಗಿಹೋದ ಸ್ವಾಯಂಭುವನೇ ಮೊದಲಾದ ನಾಲ್ವರು ಎಂದು ನಿರ್ದೇಶಿಸುತ್ತಾರೆ,ಸ್ವಾಯಂಭುವ,ಸ್ವಾರೋಚಿಷ,ರೈವತ,ಉತ್ತಮ ಇವರು ಮೊದಲು ಬಂದವರಾಗಿ ಪ್ರಧಾನರು[ವಿಭಾಗಃ ಪ್ರಾಧಾನ್ಯಂ ಪ್ರಾಥಮಿಕತ್ವಾದೇವಭವತಿ]ಎಂದು ಮಧ್ವಾಚಾರ್ಯರು ವಿವರಿಸಿ ಗೌತಮಖಿಲದ ಒಂದು ವಾಕ್ಯವನ್ನು ಪ್ರಮಾಣವಾಗಿ ಎತ್ತಿ ಹೇಳುತ್ತಾರೆ. ಆದರೆ ಅವರೂ, ಅವರನ್ನನುಸರಿಸಿ ವ್ಯಾಖ್ಯಾನಮಾಡಿದ ಜಯತೀರ್ಥರೂ ಚಾತುರ್ವರ್ಣ್ಯ ವಿಭಾಗಕ್ಕೂ ಮನುಗಳಿಗೂ ಗಂಟು ಹಾಕುತ್ತಾರೆ ; ದೇವತೆಗಳಲ್ಲಿಯೂ ಚಾತುರ್ವರ್ಣ್ಯ ವಿಭಾಗವಿರುವುದನ್ನು ಅವರು ವಿವರಿಸುತ್ತಾರೆ.

ದೇವತೆಗಳಲ್ಲಿರುವಂತೆಯೇ ಮನುಷ್ಯರಲ್ಲೂ ವರ್ಣ್ಯವ್ಯವಸ್ಥೆಯನ್ನು ಮಾಡಿದುದೇ 'ಸವರ್ಣ' 'ಸಮಾನವರ್ಣ' ; ಇದನ್ನು ಮಾಡಿದವರು ಸಾವರ್ಣಿಗಳು ಅಥವಾ ಸಾವರ್ಣಿಕರು. ಉದ್ವಾಹತತ್ತ್ವದಲ್ಲಿ ಸಾವರ್ಣವೆನ್ನುವುದು ಒಂದು ಗೋತ್ರದ ಪ್ರವರ್ತಕನ ಹೆಸರು. ಶಂಕರಾಚಾರ್ಯರು ಹೇಳುವ ಸಾವರ್ಣರು ಯಾರೊ ತಿಳಿಯದು. ಆದರೆ, ಪುರಾಣಪ್ರಸಿದ್ಧವಾದ ಸಾವರ್ಣ [ಅಥವಾ ಸಾವರ್ಣಿ] ಸವರ್ಣೆಯ ಮಗ. ಸವರ್ಣೆಯೆಂಬುದು ಸೂರ್ಯನ ಹೆಂಡತಿಯಾದ ಛಾಯೆಯ ಹೆಸರು. ಸೂರ್ಯನಿಗೆ ವಿಶ್ವಕರ್ಮನ ಮಕ್ಕಳಾದ ಛಾಯೆ, ಸಂಜ್ಞೆ ಇಬ್ಬರು ಹೆಂಡಂದಿರು.ಸಂಜ್ಞೆಯಲ್ಲಿ ಯಮ,ಯಮಿ, ಶ್ರಾದ್ಧದೇವ ಎಂಬ ಮೂವರು ಮಕ್ಕಳು ಛಾಯೆಯಲ್ಲಿ ಸಾವರ್ಣಿ, ತಪತಿ ಮತ್ತು ಶನೈಶ್ವರ ಎಂಬ ಮೂವರು ಮಕ್ಕಳು ; ಇವರಲ್ಲದೆ 'ವಡವಾ' ಎಂಬ ಮೂರನೆಯ ಹೆಂಡತಿಯನ್ನು ಪುರಾಣಗಳು ಹೆಸರಿಸಿ, ಅವಳಿಂದ ಅಶ್ವಿನೀ ದೇವತೆಗಳು ಹುಟ್ಟಿದರೆಂದೂ ಹೇಳುತ್ತವೆ. ಅಂತೂ ಸೂರ್ಯನ ಮಗನಾದ ಸಾವರ್ಣಿಯು ಮುಂದೆ [ಎಂಟನೆಯ] ಮನುವಾಗುವನೆಂದೂ ಅವನು ಮನ್ವಂತರದಲ್ಲಿ ವಿ ರೋ ಚ ನ ನ ಮಗನಾದ ಬಲಿಯು ಇಂದ್ರನಾಗುವನೆಂದೂ ಮಾರ್ಕಂಡೇಯ ಪುರಾಣ [೮೦,೧೦] ಮೊದಲಾದ ಪುರಾಣಗಳಲ್ಲಿ ಒಕ್ಕಣೆಯಿದೆ.

ಆದರೆ, ದೇವಿ ಭಾಗವತ ಸಾವರ್ಣಿಯನ್ನು 'ಛಾಯಾ ಸಂಜ್ಞಾಸುತೋ ಯೋಽಸೌ ದ್ವಿತೀಯಃ ಕಥಿತೋ ಮನುಃ, ಪೂರ್ವಜಸ್ಯ ಸವರ್ಣೋಽಸೌ ಸಾವರ್ಣಸ್ತೇನ ಕಥ್ಯತೇ' ಎಂದೂ ವಿವರಿಸಿದೆ. ಎಂದರೆ ಸಾವರ್ಣಿಯು ಛಾಯಾದೇವಿಯಲ್ಲಿ ಸೂರ್ಯನ ಮಗ. ವೈವಸ್ವತ ಮನುವು ಸಂಜ್ಞಾದೇವಿಯಲ್ಲಿ ಅದೇ ಸೂರ್ಯನ ಮಗನೆಂದೂ ಇತರ ಪುರಾಣಗಳಲ್ಲಿ ಒಕ್ಕಣೆಯಿದೆ. [ನಿದರ್ಶನಕ್ಕೆ ಮತ್ಸ್ಯಪುರಾಣ ೯-೧೧] ಆದರೆ, ಮಾರ್ಕಂಡೇಯ ಪುರಾಣವು ಮೇಲೆ ಹೇಳಿದಂತೆ ಸಾವರ್ಣಿಯನು 'ಛಾಯಾ ಸಂಜ್ಞಾಸುತಃ' ಎಂದೇ ಬಣ್ಣಿಸಿರುವುದನ್ನು ಗಮನಿಸಬೇಕು [೭೯ ನೇ

ಅಧ್ಯಾಯ] 'ಪೂರ್ವಜಸ್ಯ ಮನೋಸ್ಸಾಲ್ಯಃ' ಎಂಬ ಮಾತಿನಿಂದ ಸ್ಪಷ್ಟವಾಗುತ್ತದೆ. ಆದರೆ, ಸಾವರ್ಣಿಯನ್ನು ಛಾಯಾ ಸಂಜ್ಞೆಯ ಮಗ ಎಂದು ಹೇಳಿರುವುದರಿಂದ ವೈವಸ್ವತ ಮನುವೇ ಅವನೋ ಎಂಬ ಸಂದೇಹ ಒದಗುತ್ತದೆ. ಮುಂದೆ ಬಂದ ದಕ್ಷ ಸಾವರ್ಣಿ, ಬ್ರಹ್ಮ ಸಾವರ್ಣಿ, ಧರ್ಮ ಸಾವರ್ಣಿ, ರುದ್ರ ಸಾವರ್ಣಿಗಳು ಮುಂದಿನ ಮನ್ವಂತರಗಳ [೯ ರಿಂದ ೧೨] ಮನುಗಳು ; ಸಾವರ್ಣಿಗಳೆಂಬ ಹೆಸರನ್ನು ತಳೆದಿದ್ದರೂ [ವಿಷ್ಣು ಪುರಾಣ ೩, ೨ ; ಭಾಗವತ ೮, ೧೩ ; ಹರಿವಂಶ ೧, ೭] ಅವರು ಸಾವರ್ಣಿಯ ಮಕ್ಕಳಲ್ಲ ; ಕ್ರಮವಾಗಿ ದಕ್ಷ, ಬ್ರಹ್ಮ, ಧರ್ಮ, ರುದ್ರ ಇವರ ಮಕ್ಕಳು. ಮತ್ಸ್ಯ ಪುರಾಣದಲ್ಲಿ ಮುಂದಿನ ಮನುಗಳನ್ನು ಹೀಗೆ ಸಾವರ್ಣಿಗಳೆಂದು ಕರೆಯದೆ ರೌಚ್ಯ [ರುಚಿ ಪ್ರಜಾಪತಿಯ ಮಗ] ಭೌತ್ಯ [ಭೂತಿನಾಮಕ ಪ್ರಜಾಪತಿಯ ಮಗ] ಮೇರು [ಬ್ರಹ್ಮನ ಮಗ] ಋತು ಋತುಧಾಮ ಮತ್ತು ವಿಷ್ವಕ್ಸೇನರೆಂದು ಹೆಸರಿಸಲಾಗಿದೆ. ಆತೂ ಏಳರಿಂದ ಮುಂದೆ ಬಂದ ಮನು'ಗಳಿಗೂ ಮನುಷ್ಯರಿಗೂ ನೆಂಟು ಕಡಮೆ. ವೈವಸ್ವತ ಮನುವಿನ ಮಕ್ಕಳು: ಇಲ, ಇಕ್ಷ್ವಾಕು, ಕುಶನಾಭ, ನರಿಷ್ಯಂತ. ನಾಭಾಗ, ಶರ್ಯಾತಿ ಇವರೆಲ್ಲ ಮಾನುಷ್ಯ ರಾಜರೇ ; ಅವರ ವಂಶಗಳು ನಮ್ಮ ದೇಶದಲ್ಲಿ ಇತಿಹಾಸ ಪ್ರಸಿದ್ಧವಾದುವು. ಸಾವರ್ಣಿಯ ಮಕ್ಕಳ ಹೆಸರನ್ನು ನೋಡಿದರೆ [ಧೃತಿ, ವರೀಯಾನ್, ವೃಷ್ಟಿ, ಚರಿಷ್ಣು, ಈಡ್ಯ, ಸುಮತಿ, ವಸು, ಸಾವರ್ಣ] ದಿಟವಾದ ಮನುಷ್ಯರನ್ನು ಸೂಚಿಸುವಂತೆ ತೋರುವುದಿಲ್ಲ ; ಪ್ರಜಾಪಾಲನೆಗೆ ಆಗತ್ಯವಾದ ತತ್ತ್ವಗಳನ್ನು ಹೇಳುವ ಮಾತುಗಳು ಅವು. ಇದು ಮುಂದಿನ ಮನುಗಳ ಮಕ್ಕಳಿಗೂ ಅನ್ವಯಿಸುತ್ತದೆ.

ಆದುದರಿಂದ ಮನ್ವಂತರಗಳ ಎಣಿಕೆಯಲ್ಲಿ ಗಟ್ಟಿಯಾಗಿ ನಿಲ್ಲುವುದು ವೈವಸ್ವತ ಮನ್ವಂತರವೇ. ಪ್ರಜೆಗಳ ಉತ್ಪತ್ತಿಯಾದುದು ಅದರ, ಹಿಂದಣ ಚಾಕ್ಷುಷ ಮನ್ವಂತರದಲ್ಲಿ ; ಪ್ರಜಾಪಾಲನೆ [ಇದೇ ಮನುಗಳ ಕರ್ತವ್ಯ] 'ಮನೂನಾಂ ಪಾಲನತ್ವಂ' ಪ್ರಕಟವಾಗುವುದೇ ವೈವಸ್ವತ ಮನ್ವಂತರದಲ್ಲೇ. ಹಿಂದಿನ, ಮುಂದಿನ ಮನುಗಳೆಲ್ಲ ಕಲ್ಪನೆಯ ರೂಪಗಳೇ. ಮೇಲಾಗಿ, ಭಗವದ್ಗೀತೆಯಲ್ಲಿ ಹದಿನಾಲ್ಕು ಮನುಗಳೆಂಬ ಒಕ್ಕಣೆ ಎಲ್ಲಿಯೂ ಬರುವುದಿಲ್ಲ. ಇದು ಪುರಾಣಗಳಲ್ಲಿ ಸಿದ್ಧವಾದ ಎಣಿಕೆಯಿರಬೇಕು. ಭಗವದ್ಗೀತೆಗೆ ಪರಿಚಿತರಾದವರು ಅವರು ಯಾರಾದರೂ ಆಗಿರಲಿ ನಾಲ್ವರೇ ಮನುಗಳು. [ಚತ್ವಾರೋ ಮನವಃ] ಋಗ್ವೇದದಲ್ಲಿ ಕಾಣಸಿಗುವವರು ಮೂವರೇ ಮನುಗಳು [೬, ೪, ೧೮ ಸಂವರಣಮನು ; ೬, ೪, ೨೦ ವೈವಸ್ವತಮನು ; ೮, ೨.೨ ಸಾವರ್ಣಮನು] ಈ ಪಟ್ಟಿಗೆ ನಿರುಕ್ತಕಾರರು [೩. ೪, ೨] ಸೇರಿಸಿರುವ ಸ್ವಾಯಂಭುವಮನುವನ್ನೂ ಸೇರಿಸಿಕೊಂಡರೆ ನಾಲ್ವರು ಎನ್ನಬಹುದು.

ಮಹಾಭಾರತದಲ್ಲಿ ಹಲವರು ಮನುಗಳು ಎಂಬ ಉಲ್ಲೇಖವಿದ್ದರೂ 'ಸ್ವಾಯಂಭುವಮಾದ್ಯಾ ಮನವಃ ಭೃಗ್ವಾದ್ಯಾ ಋಷಯಸ್ತಥಾ' [೧೩, ೧೪, ೨೮೦] ಎನ್ನುವಾಗ ಪುರಾಣದ ಚತುರ್ದಶ ಮನುಗಳ ಕಲ್ಪನೆಯನ್ನು ಕಾಣುವಹಾಗಿಲ್ಲ.

ಒಂದೊಂದು ಮನ್ವಂತರದಲ್ಲೂ ಮನು, ಇಂದ್ರ, ಮನುಪುತ್ರರು, ಸಪ್ತರ್ಷಿಗಳು ಬೇರೆ ಬೇರೆಯಾಗಿರುವ ಎಣಿಕೆ ಮತ್ಸ್ಯ ಪುರಾಣ [೯] ; ವಿಷ್ಣು ಪುರಾಣ [೩, ೧] ; ಹರಿವಂಶ [೧, ೫] ಮೊದಲಾದ ಪುರಾಣಗಳಲ್ಲಿದೆ. ಈ ಪೌರಾಣಿಕ ನಿರ್ದೇಶನಗಳಲ್ಲಿ ವೈವಸ್ವತಮನ್ವಂತರದ ಸಪ್ತರ್ಷಿಗಳು ಭೃಗ್ವಾದಿಯಲ್ಲ. ಅಲ್ಲಿನ ಏಳು ಮಹರ್ಷಿಗಳು ಮರೀಚಿ ಪ್ರಭೃತಯಃ [ವಿಷ್ಣುಪುರಾಣ, ಭಾಗವತ] ಮರೀಚಿ, ಅಂಗಿರಸ, ಅತ್ರಿ, ಪುಲಸ್ತ್ಯ, ಪುಲಹ, ಕೃತು ಮತ್ತು ವಸಿಷ್ಠ ಇದೇ ಪಟ್ಟಿ ಬೇರೊಂದು ಸಂದರ್ಭದಲ್ಲಿ ಮಹಾಭಾರತದ ಶಾಂತಿಪರ್ವದಲ್ಲೂ [ನಾರಾಯಣೀಯೋಪಖ್ಯಾನ] ಬರುವದೆನ್ನಿ. ಗೀತೆಯಲ್ಲಿ 'ಮಹರ್ಷಯಃ ಸಪ್ತ' ಎಂದು ಹೇಳಿದಾಗ ಈ ಏಳು ಜನರನ್ನೇ ಸೂಚಿಸಿದೆಯೆಂದು ಕೆಲವರ ಅಭಿಪ್ರಾಯ. ಹಾಗಾದರೆ ಮಹಾಭಾರತದಲ್ಲಿ ಸ್ವಾಯಂಭುವನೇ ಮೊದಲಾದ ಮನುಗಳಿಗೆ ಹೊಂದಿಕೊಳ್ಳುವಂತೆ ಭೃಗುವೇ ಮೊದಲಾದ ಋಷಿಗಳನ್ನು ಹೇಳಿರುವುದು ಹೇಗೆ? ಗೀತೆಯ 'ಮಹರ್ಷಯಃ ಸಪ್ತ' ಎನ್ನುವ ಪ್ರಸ್ತಾಪ ಭೃಗು. ನಾಭ. ವಿವಸ್ವಾನ್, ಸುಧಾಮ, ವಿರಜ, ಅತಿನಾಮ, ಸಹಿಷ್ಣು ಎಂಬುವರನ್ನು ಕುರಿತದ್ದೆಂದೂ ಇವರು ಚಾಕ್ಷುಷ ಮನ್ವಂತರದ ಸಪ್ತರ್ಷಿಗಳೆಂದೂ, ವೈವಸ್ವತಮನ್ವಂತರಕ್ಕೆ ಹಿಂದಿನವರು ಎಂಬರ್ಥದಲ್ಲಿ 'ಪೂರ್ವೇ' ಎಂದು ಗೀತೆಯಲ್ಲಿ ವಿಶೇಷಿಸಲಾಗಿದೆಯೆಂದೂ [ಮಹರ್ಷಯಃ ಸಪ್ತ, ಪೂರ್ವೇ] ಕೆಲವು ವ್ಯಾಖ್ಯಾನಕಾರರ ವಾದ. ಅವರು ಗೀತೆಯಲ್ಲೇ ಇನ್ನೊಂದೆಡೆ ಬರುವ 'ಮಹರ್ಷೀಣಾಂ ಭೃಗುರಹಂ' [೧೦-೨೫] ಎನ್ನುವ ಉಲ್ಲೇಖವನ್ನು ಸಮರ್ಥನೆಯಾಗಿ ತೋರಿಸುತ್ತಾರೆ. ಬ್ರಹ್ಮಾಂಡಪುರಾಣದಲ್ಲಿ [ಪೂರ್ವಭಾಗ ೧೩ ೧೦೩] 'ಭೃಗ್ವಂಗಿರಾ ಮರೀಚಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ಅತ್ರಿಶ್ಚೈವ ವಸಿಷ್ಠಶ್ಚ ಸಪ್ತ ಸ್ವಾಯಂಭುವೇಽಂತರೇ' ಎಂದು ಭೃಗ್ವಾದಿ ಸಪ್ತಋಷಿಗಳನ್ನು ಸ್ವಾಯಂಭುವ ಮನ್ವಂತರದಲ್ಲೇ ಎಣಿಸಿದ್ದಾರೆ, ಅದೇ ಪುರಾಣದಲ್ಲಿ [೧, ೫೩] 'ಸಾವರ್ಣಾ ಮನವೋ ಯೇ ಚ ಚತ್ವಾರಸ್ತು ಮಹರ್ಷಿಜಾಃ' ಎಂದು ಹೇಳಿ ನಾಲ್ವರು ಸಾವರ್ಣಿಗಳು ಮಹರ್ಷಿಗಳ ಮಕ್ಕಳೆಂದು ಸೂಚಿಸಿದೆ ; ಅವರು ಚಾಕ್ಷುಷಮನ್ವಂತರದಲ್ಲಿ ಹುಟ್ಟಿದವರೆಂದೂ ಹೇಳಿದೆ. [ಉತ್ತರ ಭಾಗ ೧. ೨೬ 'ಜಜ್ಞಿರೇ ಚಾಕ್ಷುಷೇಂತರೇ' 'ಚಾಕ್ಷುಷಸ್ಯಾಂತರೇಽತೀತೇ ಪ್ರಾಪ್ತೇ ವೈವಸ್ವತಸ್ಯ ಹಿ'] ಎಂದರೆ ಸ್ವಾಯಂಭುವಮನ್ವಂತರದಿಂದ ಚಾಕ್ಷುಷಮನ್ವಂತರದ ವರೆಗೂ ಒಂದೇ ಹರವು ; ಈಗಿನ ವೈವಸ್ವತಮನ್ವಂತರಕ್ಕೆ ಹಿನ್ನೆಲೆಯಾಗಿ.

ಭಗವದ್ಗೀತೆಯ ಚೌಕಟ್ಟು ಈಗಿನ ಕಲ್ಪನೆಯಲ್ಲಿ ವೈವಸ್ವತ ಮನ್ವಂತರಕ್ಕೆ ಸಂಬಂಧಪಟ್ಟುದೇ. ಮೊದಲು ಯೋಗವನ್ನು ತಾನು ವಿವಸ್ವಾನನಿಗೆ ಹೇಳಿದುದಾಗಿಯೂ, ವಿವಸ್ವಾನನು ಮನುವಿಗೆ [ಎಂದರೆ ತನ್ನ ಮಗನಾದ ವೈವಸ್ವತ ಮನುವಿಗೆ] ಹೇಳಿದನೆಂದೂ ಕೃಷ್ಣನ ಒಕ್ಕಣೆಯೇ ಇದೆಯಷ್ಟೆ. ಅಲ್ಲಿ ಈ ಯೋಗವು 'ಮಹಾಪಾ ಕಾಲೇನ ನಷ್ಟಃ' ಎಂದಷ್ಟೇ ಇದೆ. ಈ ಮಹತ್ತಾದ ಕಾಲ ಎಂದರೇನು? ವಿಷ್ಣುಪುರಾಣದ ಒಕ್ಕಣೆಯಲ್ಲಿ [೧,೩] ಈಗ ನಾವಿರುವುದು ಆರು ಮನ್ವಂತರಗಳು

ಕಳೆದು ಏಳನೆಯ [ವೈವಸ್ವತ] ಮನ್ವಂತರದಲ್ಲೂ ಇಪ್ಪತ್ತೇಳು ಮಹಾಯುಗಗಳು ಕಳೆದು [ಒಂದು ಮಹಾಯುಗವೆಂದರೆ ೪೩ ಲಕ್ಷ ೨೦ ಸಾವಿರ ವರ್ಷಗಳೆಂದು ಒಂದು ಎಣಿಕೆ] ಇಪ್ಪತ್ತೆಂಟನೆಯ ಮಹಾಯುಗದಲ್ಲಿ ಮೊದಲ ಪಾದ ನಡೆಯುತ್ತಿರುವಾಗ ಕೃಷ್ಣನ ಮಾತಿನಲ್ಲಿ ಹೀಗೆ ಈ ಮನ್ವಂತರದಲ್ಲಿ ಇಪ್ಪತ್ತೇಳು ಮಹಾಯುಗಗಳು ಕಳೆಯಿತೆನ್ನುವ ಧ್ವನಿಯಿದೆಯೆ ? ವೈವಸ್ವತಮನುವಿನ ಮಗನಾದ ಇಕ್ಷ್ವಾಕುವನ್ನು [ಸೂರ್ಯವಂಶದ ಪ್ರವರ್ತಕ] ಅಷ್ಟು ದೂರ ಹಿಂದಕ್ಕೆ ತಳ್ಳಬಹುದೇ ?

ಈ ವಿವೇಚನೆಯಿಂದ ನನಗೆ ತೋರುವುದು, ಭಗವದ್ಗೀತೆಯಲ್ಲಿ ಮನ್ವಂತರದ ಕಲ್ಪನೆಯೇ ಕಾಣಸಿಗುವುದಿಲ್ಲ ; ಅದಕ್ಕೆ ಹಿಂದಿನ ವಾಙ್ಮಯದಲ್ಲೂ ಇಲ್ಲ. ಭಗವದ್ಗೀತೆಯಲ್ಲಿ 'ಮನವಃ' ಎಂಬ ಮಾತು ಬಂದಾಗ ಮನ್ವಂತರಗಳ ಪ್ರವರ್ತಕರು ಎಂಬರ್ಥ ಹೊರಡುವುದಿಲ್ಲ ; 'ವಿವಸ್ವಾನನು ಮನುವಿಗೆ ಹೇಳಿದ' ಎನ್ನುವಾಗ ವೈವಸ್ವತ ಮನ್ವಂತರದ ಆದಿಪುರುಷ ಎಂಬ ಧ್ವನಿಯೇನೂ ಇಲ್ಲ, ವಿವಸ್ವಾನನೆಂದರೆ ಸೂರ್ಯನೆಂದು ಹೇಳಬೇಕಾದ ಕಾರಣವೂ ಇಲ್ಲ. ನಿಘಂಟು [೨, ೩, ೨೪] ಹೇಳುವಂತೆ ವಿವಸ್ವಾನನೆಂದರೆ ಮೊದಲ ಮನುಷ್ಯ ಎಂದಷ್ಟೇ ಅರ್ಥಹೇಳಿದರೆ ಸಾಕಾಗುತ್ತದೆ. ಋಗ್ವೇದವೂ [೧೦, ೬೫, ೬] 'ದೇವೇಭ್ಯೋ ದಾಶಾದ್ಧವಿಷಾ ವಿವಸ್ವತೇ' ಎನ್ನುವಾಗ ವಿವಸ್ವಾನರೆಂದರೆ ಮನುಷ್ಯರೇ. 'ಮನು' ವೆಂದರೆ ವಿಶಿಷ್ಟನಾದ ಮನುಷ್ಯ ; ರಾಜ [ಪಾಲಯಿತಾ] ಎಂದಷ್ಟೇ ಅರ್ಥ. 'ಋಷಯಃ' 'ಮನವಃ' ಎಂದು ಭೇದ ವೆಣಿಸಿ ಹೇಳುವಾಗ ವಿದ್ಯಾ ಸಂಪ್ರದಾಯ ಪ್ರವರ್ತಕರು, ಪ್ರಜಾಪಾಲಕರು ಎಂದು ಶಂಕರಾಚಾರ್ಯರ ಅಭಿಪ್ರಾಯ ; 'ನಿತ್ಯಸೃಷ್ಟಿ ಪ್ರವರ್ತನೆ' ಮತ್ತು 'ನಿತ್ಯಸ್ಥಿತಿ ಪ್ರವರ್ತನೆ' ಎರಡನ್ನೂ ಸೂಚಿಸುವುದೆಂದು ರಾಮಾನುಜಾಚಾರ್ಯರ ಅಭಿಪ್ರಾಯ. ಈ ಅರ್ಥದಲ್ಲೇ ಯೋಗವು ಪರಂಪರಾಪ್ರಾಪ್ತವಾದುದೆಂದು ಗೀತೆ ಹೇಳುವಾಗ 'ರಾಜರ್ಷಯೋ ವಿದುಃ' [೪, ೨] ಎಂಬ ಮಾತು ಬಂದಿರುವುದು. ಸ್ಮೃತಿಗಳಪಾಲನೆ ಮನುಗಳ ಕರ್ತವ್ಯವೆಂದು ಕುಮಾರಿಲರು ಹೇಳಿರುವುದನ್ನು [ಬಿ.ಎಂ. ಶ್ರೀ ಪ್ರತಿಷ್ಠಾನದವರು ಏರ್ಪಡಿಸಿದ್ದ ಶಂ.ಬಾ. ಜೋಶಿ ದತ್ತಿಉಪನ್ಯಾಸದಲ್ಲಿ] ಈಗಾಗಲೇ ಅರಿಕೆ ಮಾಡಿದ್ದೇನೆ. ಭಗವದ್ಗೀತೆಯು ರಾಜರ್ಷಿಗಳ ಪರಂಪರೆಯಲ್ಲಿ ಬಂದ ಭಾಗವತಪಂಥದ ಗ್ರಂಥವೇ ಆದುದರಿಂದ ಈ ಪ್ರಸ್ತಾಪ ಅಲ್ಲಿ ಪ್ರಸ್ತುತವೇ ಆಗಿದೆ.

---

# ವಾನರ-ನರ ಮತ್ತು ಮನುಷ್ಯ

**ಗೌರೀಶ ಕಾಯ್ಕಿಣಿ**

"ಅರ್ಥ ಮೂಲ್ಯದ ಪಾತಳಿಯು ದೃಶ್ಯ ಪ್ರವಾಹದ ಆಚೆಗಿನ ಹಂತದಲ್ಲಿದೆ. ಈ ದೃಶ್ಯ ಸೃಷ್ಟಿಯಲ್ಲಿ ವಾನರ-ನರ ಮತ್ತು ಮನುಜ : ಮಾನವರು ಉಂಟು ಎಂಬ ತಾರತಮ್ಯ ಮೂಲ್ಯಗಳು ಹೊಳೆದದ್ದು ಎಲ್ಲಿಂದ ? ದೃಶ್ಯ ಪಾತಳಿಯ ಆಚೆಗಿಂದ ತಾನೇ ?" ಅನ್ನುತ್ತಾರೆ, **ಪೂಜ್ಯ ಡಾ|| ಶಂ. ಬಾ. ಜೋಶಿಯವರು,** ತಮ **'ವೈವಸ್ವತಮನು ಪ್ರಣೀತ ಮಾನವಧರ್ಮದ ಆಕೃತಿ'** ಪುಸ್ತಕದ ೨೯ ನೆಯ ಪುಟದಲ್ಲಿ.

ತಾರತಮ್ಯದ ಮೂಲ್ಯ ಪ್ರಾಥಮಿಕವಲ್ಲ. ಅದು ಅರ್ಥದ ಬೆನ್ನೇರಿ ಬರುವ ಊಹನೆ. ಆದರೆ ಅರ್ಥ ? ಅದನ್ನು ಈಚೆಯ ದೃಶ್ಯ ಪಾತಳಿಯಲ್ಲಿ "ವಾಗರ್ಥ" ಶಬ್ದಾರ್ಥ ರೂಪದಲ್ಲಿಯೇ ಗ್ರಹಿಸಬೇಕಾಗುತ್ತದೆ. ಅದು Significance :ನಿರ್ದಿಷ್ಟ ವಿಶಿಷ್ಟ ವಸ್ತು ಸಂಕೇತ.

ಸಮಗ್ರ ವಿಶ್ವಸೃಷ್ಟಿಯನ್ನು ಅದರ ಸತ್ವ-ಸತ್ತೆಗಳನ್ನು ಒಟ್ಟಿನಲ್ಲಿ ಎರಡು ಪ್ರಕಾರ (category) ವಾಗಿ ವರ್ಗೀಕರಿಸಬಹುದು : ದ್ರವ್ಯ ಮತ್ತು ಗುಣ. ಈ 'ಗುಣ'ವನ್ನು ಮತ್ತೆ ಎರಡು ಬಗೆಯಾಗಿ ಕಾಣಬಹುದು : ಅಸ್ತಿತ್ವ (Existence) ಮತ್ತು ಜ್ಞಪ್ತಿತ್ವ (Significance). ಈ ಜ್ಞಪ್ತಿತ್ವದ ವ್ಯಕ್ತನೆಯ ಮೊದಲ ಮಟ್ಟವೇ ಶಬ್ದಾರ್ಥ-ವಾಗರ್ಥ : ಭಾಷೆಯಲ್ಲಿ ರೂಪುಗೊಂಡ ಭಾವ.

ಇಂಥ ಅರ್ಥ ಒಡಮೂಡಲಿಕ್ಕೆ ಅನುಭವದ ಒಂದು ಚೌಕಟ್ಟು-ಸಂದರ್ಭ (frame of reference) ಅಗತ್ಯ. ಇಲ್ಲವಾದರೆ ಒಂದೇ ಶಬ್ದ ಅರ್ಥಭೇದವನ್ನು ಸೂಚಿಸಬಹುದು. 'ಕಲಿಕರ್ಣ' 'ಕಲಿಯುಗ' 'ಪಾತಕಲಿ'- ಇಲ್ಲಿ 'ಕಲಿ' ಶಬ್ದ ಒಂದೇ. ಆದರೆ ಸಂದರ್ಭಾನುಸಾರವಾಗಿ ಅದರ ಅರ್ಥ-ಭಾವ ಬೇರೆ ಬೇರೆ.

ಇಲ್ಲಿ ಒಂದು ವಿವೇಕ ಅಗತ್ಯ. ಮೂಲತಃ ಭಾಷೆಯಲ್ಲಿ ಸಮಾನಾರ್ಥಕ ಶಬ್ದ ಅಥವಾ ಪದವೆಂಬುದಿಲ್ಲ. ರೂಢಿಯಲ್ಲಿ ಸಮಾನಾರ್ಥಕವೆಂದು ಬಳಸಲಾಗುವ ಶಬ್ದಗಳನ್ನು ಅವುಗಳ ಸತ್ವ ಸೂಚ್ಯತೆಗಳ ದೃಷ್ಟಿಯಿಂದ ಗಮನಿಸಿದಾಗ ಅವುಗಳಿಗೆ ಕಾರಣವಾದ ಮೂಲದ ಹಿನ್ನೆಲೆ ಬೇರೆಯೇ ಆಗಿರುವುದು ಅರಿವಾಗದಿರದು.

ಸದ್ಯ ವಿವೇಚನೆಗೆ ಎತ್ತಿಕೊಂಡ ಈ ಮೂರು ಶಬ್ದಗಳನ್ನೇ ಈ ದೃಷ್ಟಿಯಿಂದ ಪರಾಂಬರಿಸೋಣ. ನಮ್ಮ 'ಅಮರಕೋಶ' ('ನಾಮಲಿಂಗಾನುಶಾಸನ') ದಂತೆ **ವಾನರ** ಪ್ರಪಂಚಕ್ಕೆ ಇವೆಲ್ಲ ಪರ್ಯಾಯಗಳಿವೆ-

ಕಪಿ, ಪ್ಲವಂಗ, ಪ್ಲವಗ, ಶಾಖಾಮೃಗ, ವಲೀಮುಖ, ಮರ್ಕಟ, ವಾನರ, ಕೀಶ ಮತ್ತು ವನೌಕ.

ಇವುಗಳಲ್ಲಿ ಪ್ಲವಂಗ–ಪ್ಲವಗ ಮಂಗನ ಹಾರಿಕೆಯ ನಡೆಯಿಂದ ಸೂಚಿತ. ಶಾಖಾಮೃಗ ಅವರ ನೆಲೆಯುವ ವಲೀಮುಖ ಅವರ ಮೋರೆಯ ಸುಕ್ಕುಗಳಿಂದ, ಮರ್ಕಟ ಬಹುಶಃ (ಮರ + ಕೋಡ) 'ಕಾಡವಿಳ' ಮೂಲದಿಂದ ವಾನರ ನರನೊಂದಿಗೆ ಸಾಮೀಪ್ಯ–ಸಾರೂಪ್ಯದಿಂದ, ಕೀಶ (ಕಿ + ಈಶ ಅಥವಾ ಕೀ + ಈಶ ?) ಒಂದು ತಂಡದ ಹಿರಿಯನಾಗುವ ಗುಣದಿಂದ ಹಾಗೆಯೇ ವನೌಕ-ಅಡವಿಯಲ್ಲಿ ಬದುಕುವುದರಿಂದ. (ಋಷಿ–ಮುನಿಗಳಿಗೂ ವನೌಕಸರೆಂಬ ಹೆಸರು.)

ಇನ್ನು ಕಪಿ? "ಕಂ ಪಾತಿ ಇತಿ ಕಪಿಃ" ಎನ್ನುವುದುಂಟು. "ಕ" ಅಂದರೆ ಗಾಳಿ, ನೀರು. ಅವನ್ನು ಪಾಲಿಸವುದೆಂದರೇನು ? ಇದು ತೀರ ಉತ್ಪ್ರೇಕ್ಷೆ. ಕಪಿಮುಷ್ಟಿ-ಏನನ್ನೂ ಬಿಟ್ಟುಕೊಡದಿರುವಿಕೆ ಎಂಬ ಅರ್ಥವೂ ಒಂದು ಇದೆ. ('ಕನ್ನಡ ರತ್ನ ಕೋಶ'–ಸಾಹಿತ್ಯ ಪರಿಷತ್ ಪ್ರಕಟನೆ.) ಈ ಅರ್ಥದಲ್ಲಿ ಈ ಶಬ್ದದ ಮೂಲ ಲ್ಯಾಟಿನ್ capio ಧಾತುವನ್ನು ಹೋಲುತ್ತದೆ. ಅದರ ಅರ್ಥ **hold** ಹಿಡಿ. (ಕಪಟ–ಕಪಾಟಗಳಲ್ಲಿ ಈ ಅರ್ಥದ ಹೊಳಹು ಇರಬೇಕು. ಇಂಗ್ಲೀಷಿನ **caprice, capable** ಈ ಶಬ್ದಗಳು ಈ capio ಮೂಲದವೇ !) ಹಾಗೆಯೇ ಕಪಿಲ, ಕಪಿಶ ಅಂದರೆ ನಸುಗೆಂಪು ಎಂಬ ಅರ್ಥವೂ ಇದೆ. ಇದು ಕಪಿಯ ಬಣ್ಣ.

ಇಲ್ಲಿ ವಾ–ನರ ನಮಗೆ ಗಮನಾರ್ಹ, '**ನರ**' ಶಬ್ದಕ್ಕೆ ಹತ್ತಿರವಿದ್ದುದರಿಂದ ಇದೇ ಅರ್ಥದ ಕಿಂನರ, ಕಿಂಪುರುಷ ಶಬ್ದಗಳೂ ಇವೆ.(ಆದರೆ ಪುರಾಣಾಂತರ್ಗತವಾಗಿ ಕಿನ್ನರ, ಕಿಂಪುರುಷರು ಕುದುರೆಯ ಮುಖ–ಮನುಷ್ಯ ದೇಹದ ಒಂದು ದೇವತಾ ವರ್ಗ !) 'ಕಿಂ' ಎಂಬ ಶಬ್ದದಿಂದ ಈತ ನರನೋ ಎಂಬ ಶಂಕೆ ಹುಟ್ಟಿಸುವ ಪ್ರಶ್ನಾರ್ಥಕ ಪ್ರಾಣಿ ಇದು. ಅದೇ ರೀತಿ ನರನೋ ಅಥವಾ ಇನ್ನಾರೋ ಎಂಬ ಭ್ರಮೆ ಹುಟ್ಟಿಸುವಂತಹ ಪ್ರಾಣಿ ವಾ–ನರ. ಆದರೆ ಇಲ್ಲಿ ವ್ಯಾಕರಣದ ಒಂದು ವ್ಯವಧಾನ 'ಕಿಂ' ವ್ಯಾಕರಣ ದೃಷ್ಟಿಯಿಂದ ಯುಕ್ತ ಸ್ಥಾನದಲ್ಲಿಯೇ ಪ್ರಯುಕ್ತವಾಗಿದೆ. ಆದರೆ '**ವಾ**' ಪಕ್ಷ ಸೂಚಕವಾದ ವಾ ನರನಿಗೆ ಹಿಂದೆ ಉಪಸರ್ಗದಂತೆ ಸೇರಿಕೊಂಡಿದೆ ! 'ಕಿಂ' ಕಿಂಕರ, ಕಿಂಕರ್ತವ್ಯ, ಕಿಂವದಂತಿ–ಇತ್ಯಾದಿ ರೂಪಗಳ ದಾಖಲೆಗೆ ಅನುರೂಪವಾಗಿದೆ. ಆದರೆ "ನರೋ ವಾ ಕುಂಜರೋ ವಾ" ಈ ಮಹಾಭಾರತ ಪ್ರಸಿದ್ಧಿಯ ವಾಕ್ಯದಂತೆ 'ವಾ' ಸಮುಚ್ಚಯಕ ಅವ್ಯಯವಾಗಿ ನಾಮಪದದ ಮುಂದೆ ಬರಬೇಕಾದದ್ದು 'ವಾನರ'ದಲ್ಲಿ ನರನಿಗೆ ಹಿಂದೆ ಬಾಲವಾಗಿ ಅಂಟಿದೆ !

'**ನರ**' ಶಬ್ದ ಏನು ? ಹೇಗೆ ? ಸಂಸ್ಕೃತದಲ್ಲಿ ಅದು 'ನೃ' ಶಬ್ದದಿಂದ ನಿಷ್ಪನ್ನವಾದ ಒಂದು ರೂಪ. ಅದರ ಇನ್ನೊಂದು ರೂಪ 'ನಾ'. ಇಲ್ಲಿ ಒಂದು ಮೋಜಿನ ಮಾತೆಂದರೆ ಈ ಶಬ್ದ ಮೂಲದಿಂದ ಕಂಡರೆ 'ನಾ–ಕ' ಮತ್ತು 'ನರ–ಕ' ಎರಡೂ ಒಂದೇ ! ಇನ್ನೂ ಸೂಕ್ಷ್ಮವಾಗಿ ನೋಡಿದರೆ 'ನಾಕ' ವೈಯಕ್ತಿಕ ಅನುಭವ ಸ್ಥಾನ. 'ನರಕ' ಸಾಮೂಹಿಕ ಅನುಭವದ ಸ್ಥಾನ. ('ನರಃ' ಇದು 'ನಾ' ರೂಪದ ಬಹುವಚನ !)

'**ನರ**' ಕಂದವಿಳ ಮೂಲದ್ದೇ ? ನರಳು, ನರ (ನಾಡಿ, ಸೆರೆ) ನಾರು ಇವು ಕನ್ನಡದ ಬಳಕೆಯ ಶಬ್ದಗಳು. ನರ (ನಾಡಿ) ಸಂಸ್ಕೃತ ಮೂಲದ್ದಾಗಿದ್ದರೆ ಅದು ಅದೇ ಅರ್ಥದ 'Nervus' ಎಂಬ ಲ್ಯಾಟಿನ್ ಮೂಲದ ಇಂಗ್ಲೀಷ 'Nerve' ಅನ್ನು ಹೋಲುತ್ತದೆ.

ನರನಿಂದ ಮುಂದಿನ ಹಂತ 'ಮನುಷ್ಯ'-'ಮಾನವ'-ವಿಕಾಸ ಕ್ರಮದಲ್ಲಿ. ಇವೆರಡೂ ಶಬ್ದಗಳನ್ನು ತುಸು ದಿಟ್ಟಿಸೋಣ. "ಮನು-ಮನಂತೇ ಇತಿ ಮಾನವಃ" ಎಂದು 'ಮಾನವ' ಶಬ್ದದ ವಾಡಿಕೆಯ ನಿರ್ವಚನ. ಈ ಕುರಿತು ನನಗೆ ಹೊಳೆದ ಆಕ್ಷೇಪಗಳು ಈ ರೀತಿ :

(೧) ಮನುಕುಲಕ್ಕೆ ಈ ಹೆಸರು ಆರಂಭವಾದದ್ದು ಎಂದು ? ವೈವಸ್ವತನೋ ಸ್ವಾಯಂಭುವನೋ ಆದ ಮನುವಿನ ಕಾಲದಿಂದ ಅಥವಾ ಅನಂತರ. ಈ ಮಹಾ ಪುರುಷನು ಮನುಷ್ಯ ಪ್ರಾಣಿಯ ಪ್ರಾದುರ್ಭಾವ ಆದಂದಿನಿಂದಲೇ ಬದುಕಿದವನಲ್ಲ. ಅಂದಾಗ ಮನ್ವಂತರಕ್ಕೂ ಹಿಂದೆ ಈ ಪ್ರಜ್ಞಾವಂತ ನರನಿಗೆ ಯಾವ ನಾಮ ನಿರ್ದೇಶ ಇದ್ದಿರಬೇಕು ? ಅಲ್ಲದೆ ದೃಶ್ಯ ಪಾತಳಿಯ ವಸ್ತು ಜಾತಕ್ಕೆ ಜೀವ ಜಾತಕ್ಕೆ ಅವರ ಬಾಹ್ಯರೂಪ-ಲಕ್ಷಣಗಳಿಂದ ಸಂಜ್ಞೆ ರೂಢವಾಗುವುದಲ್ಲದೆ, ಅದರ ಆಂತರಿಕ (Subjective) ಪ್ರೇರಣೆಗಳಿಂದಲ್ಲ. ಇಂಥ ನಾಮಕರಣ, ವರ್ಗೀಕರಣ ತುಂಬ ಕಾಲಾಂತರದಿಂದ ಬೌದ್ಧಿಕ ವ್ಯಾಪಾರದ ಪರಿಪಾಕದಿಂದ ಬರುವಂತಹದು.ನರನನ್ನು ಹೆಸರಿಟ್ಟು, ಅನಂತರ ವಾ-ನರನನ್ನು ಗುರುತಿಸಿದಂತೆ.

(೨) ಮನು-ಮಾನವ ಸರಿ. ಮನುವಿನ ಮಕ್ಕಳು ಮನುಕುಲ. ಆದರೆ ಮನ್ ಧಾತುವಿನಿಂದ (ಮನಸ್) ಮನಸ್ಸು ಮನನ, ಮನ್ನೀಷೆ ಇತ್ಯಾದಿ ಶಕ್ಯ. ಆದರೆ ಮನ್-ಮನು ಆದದ್ದು ಹೇಗೆ ? ಯಾಕೆ ? ಮುಂದೆ ಮನುಷ್ಯ ನಿಷ್ಪತ್ತಿಯೂ ಕೃತಕವೆನಿಸುವಂತಿದೆ. ಇದು 'ಧನುಷ್ಯ' ಮಾದರಿಯಾಗಿದ್ದರೆ ಇದರ ಮೂಲರೂಪ 'ಮನುಸ್' ಅಗಿದ್ದಿರಬಹುದೇ? ಈ ಮನುಷ್ಯನ ಹಿಂದೆ ಮನಸ್ ತತ್ವದ ಅಧಿಷ್ಠಾನ ಇದ್ದಿರಬಹುದೆಂಬುದು ತುಸು ಸಂದಿಗ್ಧವೆನಿಸುವಂತಿದೆ !

ಇಂಗ್ಲೀಷ **Man** ಇದರ ಮೂಲವನ್ನು ಅಭ್ಯಸಿಸಿದರೆ **Managee** **Manacle, Mamal, Manner, Manuscript, Manufactur,** ಮುಂತಾದ ಶಬ್ದಗಳಂತೆ ಲಾಟಿನ್ ಮೂಲದ **Manus** ದಿಂದ **Man** ಸಿದ್ಧ ವಾದಂತೆ ತೋರುತ್ತದೆ. **Manus** ಅಂದರೆ **Hand** ಮನುಷ್ಯ ಮೂಲತಃ ಕೈಯನ್ನು ಬಳಸಹತ್ತಿದ ಪ್ರಾಣಿ. ದೃಶ್ಯ ಪಾತಳಿಯಲ್ಲಿ ವಾನರನಿಂದ ನರನನ್ನುಬೇರ್ಪ ಡಿಸಿದ (ಏರ್‌ಪಡಿಸಿದ)ಧರ್ಮ, ಅವನ ಈ ಕೈಗಳನ್ನು ಉಪಯೋಗಿಸುವ ಪ್ರಯೋಗ. (ನರವೀರನ ಲಕ್ಷಣವಾಗಿ ಮಹಾಬಾಹು-ಅಜಾನುಬಾಹು-ಬಾಹುಬಲಿ-ಬಾಹುಕ ಇತ್ಯಾದಿ ವರ್ಣನೆ ಪುರಾಣ ಪ್ರಸಿದ್ಧ !). ದಕ್ಷತೆ-**Dixterity** ಕರಕುಶಲ (ದಸ್ತ ಕಾರಿ)ತೆಯ ಮೂಲ ಈ ಕೈಯನ್ನೇ ಸೂಚಿಸುತ್ತದೆ. ಇರಲಿ. ಮನುಷ್ಯನ ಪ್ರಗತಿಗೆ

ಅವನ ಬುದ್ಧಿ ವಿಕಾಸಕ್ಕೆ ಈ ಕೈ-ಪಿಡಿಯೇ ಕಾರಣ. ವಾ-ನರನಿಂದ ನರನ ಬದುಕು ಬೇರೆ ದಾರಿ ಹಿಡಿಯಲು ಆತ 'ಶಾಖಾಮೃಗ'ತ್ವದಿಂದ 'ವನೌಕ'ತ್ವಕ್ಕೆ ಇಳಿದು ಮಾನವನಾಗಿ ಮುಂದುವರಿಯಲು ಅವನ ಮುಂಗೈಯ ಇತರ ನಾಲ್ಕು ಬೆರಳುಗಳಿಗೆ ಅಂಗುಷ್ಠ (ಹೆಬ್ಬೆರಳು) ಇದಿರಾಗಿ ಬೆಳೆದದ್ದೇ (opposition of the thumb) ಕಾರಣ. "ಅಂಗುಷ್ಠ ಮಾತ್ರ ಪುರುಷ"ನೆಂಬ ವರ್ಣನೆ ಈ ಅರ್ಥದಲ್ಲಿ ಯಥಾರ್ಥವೇ ಅನ್ನಬಹುದು.

ಈ ಕಿಷ್ಕಿಂಧಾ ಕಾಂಡದ ಸದಸ್ಯರ ಹೆಸರುಗಳು ಬರೆ ಪರ್ಯಾಯನಾಮಗಳಾಗಿರಲಾರವು. ಅವು ಮೂಲತಃ ಕಪಿಯಿಂದ ವಾನರನ ವರೆಗಿನ ಮಂಗ ಮಂಡಳಿಯ ಜಾತಿ ವಿಶೇಷಗಳನ್ನು ಹೆಸರಿಸುತ್ತಿರಬೇಕು.

ಈಚೆಗೆ ೧೯ ನೆಯ ಶತಮಾನದಿಂದ ನಮ್ಮ ಜಗತ್ತಿನ ಈ ವಾನರ ವಂಶಗಳ ಬೇರೆ ಬೇರೆ ಮಾದರಿಗಳು ಏಶಿಯಾ, ಆಫ್ರಿಕಾಗಳಲ್ಲಿ ಬೆಳಕಿಗೆ ಬಂದಿವೆ. ಇವುಗಳಲ್ಲಿ ಗೊರಿಲ್ಲಾ, ಓರಾಂಗಉಟಾಂಗ, ಚಿಂಪೆಂಝೀ, ಗಿಬನ್, ಬಬೂನ ಮುಂತಾದವು ಮೋಟುಬಾಲದ ಅಥವಾ ಬಾಲವಿಲ್ಲದವು- ನರನನ್ನು ಹೋಲುವ (anthropoid apes) ವಾಗಿರುವುದು ಗಮನಾರ್ಹ. ಗೊರಿಲ್ಲಾ ದೊಡ್ಡ ದೇಹದ ಭೀಕರ ಪ್ರಾಣಿ. ಆಫ್ರಿಕೆಯ "ವನ ಮನುಷ್ಯ" ಒರೆಂಗಉಟಾಂಗ ಮಲಯಾದ ಭೀಮಕಾಯ. ಚಿಂಪೆಂಝೀಯೂ ಆಫ್ರಿಕಾದ 'ವನೌಕ'. ಹಾಗೆಯೇ ಗಿಬನ್ ಅಜಾನುಬಾಹು. ಬಬೂನ ಏಶಿಯಾ ಆಫ್ರಿಕೆಗಳಲ್ಲಿ ಕಾಣಸಿಗುವ ಹೆಗ್ಗೋಡಗ.

ಮಾನವನ ಪ್ರಾಚೀನತೆಯನ್ನು ಶತಮಾನಗಳಲ್ಲಿ ಅಲ್ಲ, ದಶಸಹಸ್ರ ವರ್ಷಗಳ ಕಾಲಮಾನದಿಂದ ಅಳೆಯಬೇಕು. ಆತ ಪ್ರಚಂಡ ಮಹಾಕಾಯ ಪ್ರಾಣಿಗಳನ್ನೂ, ಖಡ್ಗಮೃಗ, ಸಿಂಹ, ಹೆದ್ದಾನೆ, ಹೆಬ್ಬಾವುಗಳನ್ನು ಇದುರಿಸಿ ಶಿಲೆಯ ಆಯುಧಗಳನ್ನು ಮಾಡಲು ಹೂಡಲು ಆರಂಭಿಸಿದಂದಿನಿಂದ ಇಂದಿಗೆ ಬಹುಶಃ ೧,೫೦,೦೦೦ ವರ್ಷಗಳೇ ಸಂದಿರಬೇಕು.

ಇಷ್ಟೊಂದು ಖಚಿತ; ಇಂದು ನಮಗೆ ಗೊತ್ತಿರುವ ಯಾವುದೇ ವಾನರ ಕುಲದಿಂದ ಮಾನವ ಹುಟ್ಟಿ ಬಂದಿಲ್ಲ. ಆದರೆ ಆತನ ಉಗಮ ಅಥವಾ ಉದಯ ಇವೆಲ್ಲ ಕುಲಗಳಿಗೂ ಅವನಿಗೂ ಕೂಡಿಯೇ ಮೂಲವಾದ ಒಂದು ಕಪಿವರ್ಗದಿಂದ ಸಂಭವಿಸಿರಬೇಕು. ಈ ಉಪಮಾನವನು ವಾನರ ಕುಲದ ಇತರ ಶಾಖೆಗಳು ಸ್ಪಷ್ಟವಾಗಿ ಬೇರ್ಪಟ್ಟು ಸ್ಥಾಪಿತವಾಗುವುದಕ್ಕೆ ಮುಂಚೆಯೇ ಮನುಕುಲದ ಮೂಲ ಪುರುಷನಾಗಿ ಪ್ರತ್ಯೇಕವಾದ ಬದುಕನ್ನು ಆರಂಭಿಸಿರಬೇಕು.

ವಾನರ ನರನಾದದ್ದು **ಉಪಮಾನವ**(Subhuman ಅಥವಾ hominid) ನಾಗಿ ಮಾರ್ಪಟ್ಟದ್ದು ಹೇಗೆ ? ಸ್ವಲ್ಪದರಲ್ಲಿ ಹೇಳುವುದೆಂದರೆ ಅವನ ಈ ಉತ್ಕ್ರಾಂತಿಯ ಘಟಕಗಳು ಇನ್ನೂ ಅಜ್ಞಾತ.

ಪ್ರಾಣಿಶಾಸ್ತ್ರದ ದೃಷ್ಟಿಯಿಂದ ಮಾನವನು ಸೇರ್ಪಡೆ ಆಗುವ ವಾನರ ಕುಲವು

ಇತರ ಪ್ರಾಣಿ ಜಾತಿಗಳಿಗಿಂತ ಮಿಗಿಲಾದ ಬುದ್ಧಿಮತ್ತೆಯಿಂದ ವಿಶಿಷ್ಟವಾಗಿದೆ. ವಾನರರ ಬಹಳ ಅರ್ಥಪೂರ್ಣವಾದ ಕೆಲವೊಂದು ಚಟುವಟಿಕೆಗಳಲ್ಲಿ ಇದರ ಉದಾಹರಣೆ ಸಿಗುತ್ತವೆ : ಅರೆ ನೀಟಾಗಿ ನಡೆದಾಡುವುದು, ಕಲ್ಲು–ಕೋಲು ಬಳಸುವುದು, ಆಸರೆಗಳನ್ನು ಕಟ್ಟಿಕೊಳ್ಳುವುದು, ಕುಟುಂಬಸ್ಥರಾಗಿ ಬದುಕುವುದು, ಗುಂಪುಗೂಡಿ ಸಹಕರಿಸುವುದು, ನಾಯಕನನ್ನು ಒಟ್ಟಾಗಿ ಹಿಂಬಾಲಿಸುವುದು, ಬಹಳಷ್ಟು (ತಮ್ಮದೇ ಆದ ಸಂಜ್ಞೆಗಳಲ್ಲಿ) ಮಾತನಾಡುವುದು ಇತ್ಯಾದಿ. ಈ ಉಪಮಾನವ ವಾನರರು ಹಾಗೆ ಸಾಮಾಜಿಕರಲ್ಲ. ಆದರೆ **ಮಾನವ** ಸ್ಪಷ್ಟವಾಗಿಯೇ ಸಾಮಾಜಿಕ. ಆತ ಜೀವನ ಸಂಘರ್ಷದಲ್ಲಿ ಸಾಮಾಜಿಕವಾಗಿಯೇ ಭಾಗವಹಿಸುವನು. ಏಕೆಂದರೆ ಮಾನವನು ಸಮಾಜವನ್ನು ಮಾಡಿಲ್ಲ ; ಸಮಾಜವು ಮಾನವನನ್ನು ಮಾಡಿತು.

ಈ **ಉಪಮಾನವನ** ಸ್ಥಾನವೆಲ್ಲಿ ? ಮಾನವೇನು ? ಆತ ವಾನರ ಮತ್ತು ನರ ಇವರ ನಡುವಿನವನೋ ಅಥವಾ ನರ ಮತ್ತು ಮಾನವ ಇವರ ನಡುವಿನವನೋ? ಮಾನವ ವಂಶ ಶಾಸ್ತ್ರಜ್ಞರು ನಾಗರಿಕತೆಯ ಇತಿಹಾಸವನ್ನು ಮೂರು ಮುಖ್ಯ ಕಾಲ ಖಂಡಗಳಲ್ಲಿ ವಿಂಗಡಿಸುವುದು ಅನುಕೂಲವೆಂದು ಕಂಡುಕೊಂಡಿದ್ದಾರೆ : ಶಿಲಾಯುಗ, ಕಂಚಿನ ಯುಗ ಮತ್ತು ಕಬ್ಬಿಣ ಯುಗ. ಇಟ್ಟಿಗೆ, ಶಿಲೆ, ತಾಮ್ರ ಹಾಳೆಗಳಲ್ಲಿ ಬರೆದಿಟ್ಟ, ಕೊರೆದಿಟ್ಟ ಇತಿಹಾಸದ ಆಚೆಗೆ ಅಗೆದಂತೆ ನಾವು ಶಿಲಾಯುಗವನ್ನು ಹೊಕ್ಕುತ್ತೇವೆ. ನಾವು 'ನಾಗರಿಕತೆ'ಯೆಂದು ಗುರುತಿಸುವ ಸಾಮುದಾಯಿಕ ಬದುಕಿನ ಮಾದರಿ 'ನಗರ' ಗಳಾದಂದಿನಿಂದ, ಕ್ರಿ.ಪೂ. ೬೦೦೦ ವರ್ಷಗಳೀಚೆಯಿಂದ ಶುರುವಾಯಿತು. ಆಗ ಮಾನವ ಬೇಟೆಯಿಂದ ಬೇಸಾಯಕ್ಕೆ–ಪಶುಪಾಲನೆಗೆ, ಮಣ್ಣು ಪಾತ್ರೆ, ಹೊಸ ಬಗೆಯ ಉಪಕರಣಗಳೊಂದಿಗೆ ಸ್ಥಾಯೀ ಜೀವನದ ಸ್ವೀಕಾರಕ್ಕೆ ಸ್ಥಾಪಿತ ಸಮುದಾಯಗಳ ಬೆಳವಣಿಗೆಗೆ ಹೊರಳಿದ. ಈ ಕಾಲವನ್ನು ನವಶಿಲಾಯುಗವೆಂದು ಪರಿಗಣಿಸಲಾಗಿದೆ. ಈ ಬದುಕಿನ ನಾಟಕದ ನಾಯಕನೇ **ಉಪಮಾನವ.** ಈ ಬದುಕಿನ ವ್ಯಾಪ್ತಿ ಅಂದಿನ ಯುರೋಪ, ಏಶಿಯಾ, ಆಫ್ರಿಕಾಗಳ ಹೆದ್ದಾರಿ ಕೂಟವೆನಿಸಿದ ಸಮೀಪಪೂರ್ವ ಭೂಪ್ರದೇಶ. ಮುಂದಿನ ಕಂಚು–ಕಬ್ಬಿಣಗಳ ಆಯುಧೋಪಕರಣಗಳ ಯುಗಾದಿಯೂ ಇಲ್ಲಿಯೇ.

ಈ ನವ ಶಿಲಾಯುಗದ ಪ್ರಸಾರ ಕ್ರಿ.ಪೂ. ೩೦೦೦ ವರ್ಷಗಳತನಕವೂ ಪಶ್ಚಿಮ ಯುರೋಪ ಅಥವಾ ಭಾರತಗಳನ್ನು ತಲುಪಿದ್ದಿಲ್ಲ. ಉತ್ತರ ಯುರೋಪ ಪೂರ್ವ ಏಶಿಯಾಗಳನ್ನು ಕ್ರಿ.ಪೂ. ೨೦೦೦ ವರ್ಷಗಳ ತನಕವೂ ಮಧ್ಯಆಫ್ರಿಕಾ ಜಪಾನಗಳನ್ನು ಕ್ರಿ.ಪೂ. ೧೦೦೦ ವರ್ಷಗಳ ತನಕವೂ ತಲುಪಿದ್ದಿಲ್ಲ. ದಕ್ಷಿಣ ಆಫ್ರಿಕಾ ಮತ್ತು ಆಸ್ಟ್ರೇಲಿಯಾ ೧೮–೧೯ ಶತಮಾನದವರೆಗೂ ಪ್ರಾಚೀನ ಶಿಲಾಯುಗದಲ್ಲಿಯೇ ಇದ್ದವು. ಅಮೇರಿಕೆಯ ಬಹುಭಾಗ ೧೬ನೆಯ ಶತಮಾನದ ತನಕವೂ (ಯುರೋಪಿಯನ್ನರ ಆಗಮನದ ತನಕ) ಬೇಟೆಯ ಬದುಕಿನ ಅವಸ್ಥೆಯಲ್ಲಿಯೇ ಅಲೆಯುತ್ತಿತ್ತು. ಆದರೆ ಅಮೇರಿಕೆಯ ಪೇರೂ–ಮನು ಜನಾಂಗ ಒಂದು ನಾಗರಿಕತೆಯ ಮಾದರಿಯನ್ನು ಚೆನ್ನಾಗಿಯೇ ಬೆಳೆಯಿಸಿಕೊಂಡಿತ್ತು.

ಹಳೆಯ ಶಿಲಾಯುಗದ ಅವಶೇಷಗಳ ಶೋಧ, ಎಲುಬುಗಳ-ಆಯುಧೋಪಕರಣಗಳ ಶೋಧ ೧೮೬೭ ರಲ್ಲಿ ಯುರೋಪದಲ್ಲಿ ಆಯಿತು. ಈ ಆಯುಧಾವಶೇಷಗಳು ಲಕ್ಷಾಂತರ ವರ್ಷ ಹಳೆಯವೆಂದು ಗುರುತಿಸಲಾಯಿತು. ಈ ಹಳೆಯ ಶಿಲಾಯುಗದ ಉಪಮಾನವ ನವಶಿಲಾಯುಗದವನಿಗಿಂತ ಬದುಕಿನ ಕೆಳ ಹಂತದವನು. ಬೇಟೆಗಾರಿಕೆಗಿಂತ ತುಸು ಹೆಚ್ಚಿನ ಬಾಳು ಕಂಡವನು. ಸ್ಪೇನ, ದಕ್ಷಿಣ ಫ್ರಾನ್ಸದ ಕೆಲವು ಗವಿಗಳಲ್ಲಿ ಆತ ಬಣ್ಣಗಳಲ್ಲಿ ಬರೆದ ಆ ಕಾಲದ ವಿವಿಧ ದೊಡ್ಡ ಗಾತ್ರದ ಪ್ರಾಣಿಗಳ ರೇಖಾ ಚಿತ್ರಗಳು ದೊರೆತಿವೆ. ಈ ಚಿತ್ರ ಚತುರರು-ಆ ಮಟ್ಟಿಗೆ ಪ್ರಜ್ಞಾವಂತರು-ಕ್ರಿ.ಪೂ. ೧೦,೦೦೦ ವರ್ಷಗಳ ಸುಮಾರಿಗೆ ಬದುಕಿದವರು.

ಈ ಆದಿಮಾನವ, ವಾನರ-ನರ-ಮನುಷ್ಯ ಈ ಪರಂಪರೆಯಲ್ಲಿ ಖಚಿತವಾಗಿಯೂ ಎಲ್ಲಿ ? ನರನ ಆಚೆಗೋ ಈಚೆಗೋ ಇನ್ನೂ ನಿಷ್ಕರ್ಷವಾಗಬೇಕು.

ಅದು ಹೇಗೂ ಇರಲಿ. ಈ ಆದಿ ಅಥವಾ ಉಪಮಾನವನ ಆಕೃತಿ ಸ್ವರೂಪ ಹೇಗಿದ್ದಿರಬಹುದು ?

೧೮೬೮ ರಲ್ಲಿ ಆಗ್ನೇಯ ಫ್ರಾನ್ಸದಲ್ಲಿ ಕ್ರೊಮ್ಯಾಗ್ನನ್ ಎಂಬಲ್ಲಿ ಐದು ಮಾನವ ಅಸ್ಥಿಪಂಜರಗಳು ಉತ್ಖನನದಲ್ಲಿ ದೊರೆತವು. ಇನ್ನೂ ಕೆಲವು ಆಮೇಲೆ ಸಿಕ್ಕವು. ಇವೆಲ್ಲ ಕ್ರಿ.ಪೂ. ೩೫,೦೦೦ ದಿಂದ ೪೦,೦೦೦ ವರ್ಷ ಹಳೆಯವೆಂದು ಭೂಗರ್ಭ ಶಾಸ್ತ್ರಜ್ಞರು ಗೊತ್ತುಮಾಡಿದ್ದಾರೆ. ಈ ಕ್ರೊಮ್ಯಾಗ್ನನ್ ಮನುಷ್ಯನೆ, ನಮ್ಮ ನಾಗರಿಕತೆಯ ಆದಿಪುರುಷನು. ಆದರೆ ಈತ ನರ-ಮನುಷ್ಯನೋ ವಾನರ-ನರನೋ ? ಇಂದಿನ ಸರಾಸರಿ ಎತ್ತರದ ಮಾನವನಿಗಿಂತ ಉದ್ದ ಆಳು. ದೊಡ್ಡ ಮಿದುಳಿನ 'ಪೆಟ್ಟಿಗೆ'ಯವನು; ದಾಂಡಿಗ. ಈಚಿನ ಮಾನವ ಜಾತಿಯೊಂದಿಗೆ ಬೆರೆತು ವಂಶವೃದ್ಧಿಗೊಳಿಸಲು ಯೋಗ್ಯ ! ಒಳ್ಳೆಯ ಮೈಕಟ್ಟು, ಮೊಗಚರ್ಯೆಯುಳ್ಳವ.

ಕ್ರಿ.ಪೂ. ೨೦,೦೦೦ ವರ್ಷಗಳ ಹಿಂದೆ ಈತನ ಅಲೆದಾಟ ಆಫ್ರಿಕಾ, ಏಶಿಯಾ ಯುರೋಪಗಳ "ವಿಶ್ವದ್ವೀಪ"ದ ಮಟ್ಟಿಗೇ ಇತ್ತು. ಹೀಗೆ ಹಿನ್ನಡೆಯಲ್ಲಿ ಪ್ರಾಗೈತಿಹಾಸದ ಹಂತಗಳನ್ನುಗೊತ್ತುಪಡಿಸಲು ಪುರಾತತ್ತ್ವಶಾಸ್ತ್ರಜ್ಞರು ಮಿತಿಮಾಪನೆಯ ತಂತ್ರವನ್ನು ಖಚಿತಪಡಿಸಿಕೊಂಡಿದ್ದಾರೆ. ಆ ಮೇರೆಗೆ ನಮ್ಮ ಪ್ರಾಚೀನ ನಾಗರಿಕತೆಗಳಿಂದ ಕ್ರೊಮ್ಯಾಗ್ನನ್ ಮನುಷ್ಯನ ತನಕ ೨೦,೦೦೦ ವರ್ಷಗಳ ಕಾಲಾವಧಿಯ ಚರಿತ್ರೆಯ ಹೆಜ್ಜೆ-ಪಾಡು ಪತ್ತೆ ಹಚ್ಚಲಾಗಿದೆ.

ನರನೇ ಪ್ರಜ್ಞಾವಂತನಾದ ಬಳಿಕ ಮನುಜ ವರ್ಗದವನಾದನು. ಈ ಗುಣ ಸಂಕ್ರಮಣದಲ್ಲಿ ಈ ಕ್ರೊಮ್ಯಾಗ್ನನ್ ಉಪಮಾನವನ ನೆಲೆ-ನಿಲುಮೆ ಎಲ್ಲಿ ?

   

ವಾನರರಲ್ಲಿ ಹೇಗೆ ಹಲವು ಪ್ರಕಾರಗಳೋ ಹಾಗೆಯೇ ಈ ನರವರ್ಗದಲ್ಲಿಯೂ ಕೆಲವು ಮಾದರಿಗಳು ಉತ್ಖನನದಿಂದ ಅಲ್ಲಲ್ಲಿ ಆಗೀಗ ದೊರೆತಿವೆ-ದೊರೆಯುತ್ತಿವೆ.

ಇವರನ್ನು ಕ್ರೊಮ್ಯಾಗ್ನನ್ ಮನುಷ್ಯನೆ ಉದಯಾದ ತನಕದ ನರ-ವಾನರರ ನಡುವಿನ "ಕೊಂಡಿ"ಗಳೆನ್ನಬಹುದೇನೋ ! ಈ ಮಾದರಿಗಳು ಸಂಕ್ಷೇಪವಾಗಿ ಇಂತಿವೆ :

**ನಿಯಾಂಡರ್ಥಲ್ ಮನುಷ್ಯ :** ಶೋಧ ವರ್ಷ ೧೮೫೭ ಜರ್ಮನಿಯ ರೈನಲ್ಯಾಂಡ ಕೊಳ್ಳದಲ್ಲಿ. ಇವನ ತಲೆ ಕಡಿದಾದ ಇಳಿಜಾರು, ಭಾರವಾದ ಮುಂದೆ ಬಂದ ಹಣೆ, ಆಕಾರ ಗಿಡ್ಡ, ದಪ್ಪ, ತುಸು ಮುಂದೆ ಬಾಗಿದ ಜೋಲು ಹೆಗಲಿನ ದ್ವಿಪಾದ ಪಶು. ಐದು ಅಡಿಗಿಂತ ತುಸು ಎತ್ತರ, ಎದೆ ಸಣ್ಣ ಪೀಪಾಯಿಯಂತೆ, ತುಂಬ ಹೊಣೆ, ದಟ್ಟ-ಕಪ್ಪು ಪೊದೆ ಹುಬ್ಬು, ಗದ್ದ ತೀರ ಕಿರಿದು, ಪಶುಚರ್ಯೆ, ಆದಾಗ್ಯೆ ಮನುಷ್ಯ ಮಾತ್ರ, ಗಡ್ಡ ಬೋಳಿಸಿ, ತಲೆಕೂದಲು ಮಾಟವಾಗಿ ಕತ್ತರಿಸಿ, ಅಚ್ಚುಕಟ್ಟಾಗಿ ಬಟ್ಟೆ ತೊಡಿಸಿ ಬಿಟ್ಟರೆ ನಮ್ಮ ನಿಮ್ಮಲ್ಲಿ ಬೇರೆಯಾಗಿ ಕಾಣಲಿಕ್ಕಿಲ್ಲ ! ಇವನ ಅವಶೇಷಗಳು ರಶಿಯಾ, ಸೈಬೇರಿಯಾ, ಪೆಲೆಸ್ಟಾಯಿನ್, ಇರಾಕಗಳಲ್ಲಿ ಬೇರೆ ಬೇರೆ ೪೦ ಎಡೆಗಳಲ್ಲಿ ೧೦೦ ಅಸ್ಥಿ ಪಂಜರಗಳು ದೊರೆತಿವೆ, ಬಹುಶಃ ೨೦,೦೦೦ ವರ್ಷ ಹಿಂದೆ ಬದುಕಿದ ಉಪಮಾನವ.

**ರ್ಹೊಡೇಶಿಯನ್ ಮನುಷ್ಯ** (೧೯೨೧) **:** ಆಫ್ರಿಕಾದ ರ್ಹೊಡೇಶಿಯಾ ದಲ್ಲಿ ಇವನ ಅವಶೇಷಗಳು ಸಿಕ್ಕವು.

**ಸೊಲೋ ಮನುಷ್ಯ** (೧೯೩೦) **:** ಜಾವಾದ ಸೊಲೋ ಹೊಳೆಯ ಗುಂಟ ದೊರೆತ ಅವಶೇಷ. ಉಪಮಾನವನದೇ ಇನ್ನೊಂದು ಪರಿ. ನಿಯಾಂಡರ್ಥಲ್ ಗೋತ್ರದ್ದೇ ಪ್ರವರ. ನಮ್ಮ ಹಳೆಯ ವಂಶಗಳೊಂದಿಗೆ ಬೆರೆತು ಹೋಗಿರಬೇಕು.

**ಹೈಡೆಲ್ ಬರ್ಗ ಮನುಷ್ಯ** (೧೯೦೭) **:** ಇನ್ನೂ ಹಳೆಯ ಮಾದರಿ. ಇವನ ಹುತ್ತಿಗೆಯ ಎಲುಬು ಸಿಕ್ಕಿದೆ. ಸ್ವಾನ್ಸಕೊಂಬ (ಇಂಗ್ಲಂಡ) ಎಂಬಲ್ಲಿ ತಲೆ ಬುರುಡೆಯ ಓಡುಗಳು ಸಿಕ್ಕಿದ್ದು, ಇವು ನಿಯಾಂಡರ್ಥಲ್‌ಮಾದರಿಗಿಂತ ಹಳೆಯ ಮಾದರಿ. ಇಂಥ ಒಂದು ಅವಶೇಷ ಬುಡಾಪೆಸ್ಟದ ಪಶ್ಚಿಮಕ್ಕೆ ದೊರೆತಿದ್ದು (೧೯೬೦) ಅದು ೧೧,೦೦೦ ವರ್ಷ ಹಳೆಯದೆಂದು ಗೊತ್ತಾಗಿದೆ.

**ಜಾವಾ ಮನುಷ್ಯ** (೧೮೮೦) **:** ಡಚ್ ಪ್ರಾಗೈತಿಹಾಸ ಸಂಶೋಧಕನೊಬ್ಬ ೩ ವರ್ಷಗಳ ಹುಡುಕಾಟದ ಕೊನೆಗೆ ಈ ಮಾದರಿಯ ತಲೆ ಬುರುಡೆಯ ಮೇಲ್ಭಾಗ ಕಂಡು ಹಿಡಿದನು. ಈ ಬುರುಡೆ (ಮಿದುಳಿನ ಆಯ) ವಾನರನದಕ್ಕಿಂತಲೂ ದೊಡ್ಡದು. ಮಾನವನದಕ್ಕಿಂತಲೂ ಸಣ್ಣದು. ಇದೇ ನಿಟ್ಟಿನಲ್ಲಿ ೧೯೩೦ರಲ್ಲಿ ಇನ್ನೊಬ್ಬ ಡಚ್ ವಿಜ್ಞಾನಿ ಇನ್ನೂ ಹಲವು ಎಲುಬುಗಳನ್ನು ಪತ್ತೆಮಾಡಿದನು. ಇದರಿಂದಾಗಿ ಒಬ್ಬ ಸಣ್ಣ ಮಿದುಳಿನ ಪೊದೆ ಹುಬ್ಬಿನ ನರ-ಮನುಷ್ಯನ ರೂಪ ಸಿದ್ಧಗೊಳವಾಯಿತು-ನಿಯಾಂಡರ್ಥಲ್ ಗೋತ್ರದವನು.

**ಪೀಕಿಂಗ ಮನುಷ್ಯ** (೧೯೨೯) : ಜಾವಾ ಮನುಷ್ಯನನ್ನು ಹೋಲುವಾತ. ಬೆಂಕಿಯು ಮತ್ತು ಎಲುಬಿನ-ಶಿಲೆಯ ಆಯುಧಗಳ ಬಳಕೆ ಬಲ್ಲವನು. ಚಿಕ್ಕ ಮಿದುಳಿನ Hominid.

ಈ ಪೀಕಿಂಗ ಮನುಷ್ಯ ನೆಲೆಸಿದ ಏಶಿಯಾದ ಪ್ರದೇಶವು ಮಾನವನ ಉದಯ ಸ್ಥಾನವೆನ್ನಲಾಗಿತ್ತು. ಆದರೆ ೨೦ ನೆಯ ಶತಮಾನದ ಉದಯ ಕಾಲದಲ್ಲಿ ಮಾನವ ವಂಶ ಶಾಸ್ತ್ರಜ್ಞರ, ಪುರಾತತ್ತ್ವವೇತ್ತರ ಲಕ್ಷ್ಯ ಆಫ್ರಿಕೆಯಲ್ಲಿ ನಟ್ಟಿತು. ಆಫ್ರಿಕೆ ಕಪಿ ಕುಲಗಳ-ವಿಶೇಷತಃ ದೊಡ್ಡ ವಾನರರ ಕಿಷ್ಕಿಂಧೆ ! ರ್‍ಹೊಡೇಶಿಯನ್ ಮನುಷ್ಯನ ಉಲ್ಲೇಖ ಹಿಂದೆ ಬಂದಿದೆ.

**ಆಸ್ಟ್ರಲೋಪಿಥಿಕಸ್** (೧೯೨೪) ಮಾದರಿ ದಕ್ಷಿಣ ಆಫ್ರಿಕೆಯ ಟಾಂಗ್ಸ್ ಎಂಬಲ್ಲಿ ಪತ್ತೆ ಆಯಿತು. ಮಾನವ ಸದೃಶ ಸಣ್ಣ ತಲೆ ಬುರುಡೆ. ಹಲ್ಲು ಎಲುಬು ವಾನರ (Ape) ಮಾದರಿಯವು. ಮೋರೆ ಜಾವಾ ಮನುಷ್ಯನಿಗಿಂತ ಕೆಳಮಟ್ಟದ ಮಾನವ ಮಾದರಿ. ಆದರೆ ಹಣೆ, ಹಲ್ಲು ಹೆಚ್ಚು ಮಾನವೀಯ. ಈ ಮಾನವಪಶು ನೀಟಾಗಿ ನಿಲ್ಲಬಲ್ಲ, ನಡೆದಾಡಬಲ್ಲ, ಉಪಕರಣಗಳನ್ನು ಬಳಸಬಲ್ಲ. ಬಹುಶಃ ಪ್ರಾಥಮಿಕ ಸ್ವರೂಪದ ಮಾತೂ ಬಲ್ಲ.

**ಈಸ್ಟ ಆಫ್ರಿಕನ್ ಮನುಷ್ಯ** (೧೯೫೯) ವಿಜ್ಞಾನಿ ಲೀಕೀ ಮತ್ತು ಅವನ ಹೆಂಡತಿ ಮೇರಿ ಟಾಂಝಾನಿಯಾದ ಓಲ್ಡುವಾಯಿ ಕೊರಕಲಿನಲ್ಲಿ ೨೫ವರ್ಷ ಶೋಧದ ನಂತರ ದೊರೆತ ಅತಿ ಸಣ್ಣ ಉಪಮಾನವ ತಲೆ ಬುರುಡೆಯನ್ನು ಕಂಡು ಹಿಡಿದರು. (ಕಂಡವರು ಮೇರಿ !) ಈತ ವಾನರನಿಗಿಂತ ನರನಿಗೆ ಹೆಚ್ಚು ಹತ್ತಿರ. ನಾಲ್ಕೂವರೆ ಅಡಿ ಎತ್ತರ. ಆಗಲೇ ಹೆಬ್ಬೆರಳು ಇದುರಾಗಿದ್ದ ಕೈಗಳನ್ನು ಪಡೆದಿದ್ದ.

**ರಾಮಪಿಥಿಕಸ್** (೧೯೩೦) ಚಪಲ ಮಾನವ (Homohabilis) ಆಫ್ರಿಕನ್ ಮಾದರಿಗಿಂತ ಹಳೆಯ ನರ-ವಾನರರ ವಂಶಕ್ಕೆ ಸಾಮಾನ್ಯ ಮೂಲ ಪುರುಷ ನೆನ್ನಬಹುದಾದ ಈ ಪ್ರಾಣಿಯು ಮೇಲ್ದವಡೆ ಎತ್ತರ. ಭಾರತದಲ್ಲಿ ಜಿ. ಇ. ಲೆವಿಸ್ ಎಂಬ ಸಂಶೋಧಕನಿಗೆ ದೊರೆಯಿತು. ಅದು ಮೂರು ದಶಲಕ್ಷ ವರ್ಷ ಹಳೆಯದೆಂದು ಗಣಿಸಲಾಯಿತು. ಆದರೆ ಮೇಲೆ ಹೇಳಿದ ಸಂಶೋಧಕ ಲೀಕೀ ಐಸೋಟೋಪ ಪರೀಕ್ಷೆಗೊಳಪಡಿಸಿದ. ಇದೇ ಮಾದರಿಯನ್ನು ಹೋಲುವ ಅವಶೇಷಗಳು ೧೪ ದಶ ಲಕ್ಷ ವರ್ಷ ಹಳೆಯವೆಂದು ಖಚಿತ ಪಡಿಸಲಾಯಿತು.

**ಪ್ರೊಕೊನ್ಸಲ್ ಮನುಷ್ಯ** (೧೯೪೮) ಸಂಶೋಧಕ ಲೀಕೀಶೋಧಮಾಡಿದ, ಇನ್ನೂ ಹಳೆಯ (೨೫ ದಶಲಕ್ಷ ವರ್ಷ ಹಿಂದಿನ) ಪಳೆಯುಳಿಕೆ. (ಲಂಡನ್ ಪ್ರಾಣಿ ಸಂಗ್ರಹಾಲಯದಲ್ಲಿ ಇರುವ ಪ್ರಸಿದ್ಧ ಚಿಂಪೆಂಝೀ ಕೊನ್‌ಸಲ್‌ನಿಗಿಂತ ಪೂರ್ವದ ವಾನರನೆಂದು ಈ ನಾಮಕರಣ ! ) ಈ ಮಂಗಪುಂಗವನು ಹೆಗ್ಗೋಡಗಳಾದ

ಗೊರಿಲ್ಲಾ, ಒರೆಂಗ ಒಟ್ಟಾಂಗ, ಚಿಂಪೆಂಝೀಗಳಿಗೂ ಪಿತಾಮಹ. ಅಂದಾಗ ರಾಮ ಪಿಥೆಕಸ ಮತ್ತು ಈ ಪ್ರೊಕೊನ್ಸಲ್ ಇಬ್ಬರಿಗೂ ಪೂರ್ವಜ. ಸುಮಾರು ೪೦ ದಶಲಕ್ಷ ವರ್ಷಗಳ ಹಿಂದೆ ಈ ಆಫ್ರಿಕಾ, ದಕ್ಷಿಣ ಏಶಿಯಾ ಪ್ರದೇಶದಲ್ಲಿ ಆಗಿ ಹೋಗಿರಬೇಕು.

ಹೀಗಿದೆ-ಸ್ಥೂಲವಾಗಿ ಈ ಉಪಮಾನವ ಅಥವಾ ವಾನರ-ನರ-ಮಾನವ ವಂಶೋದ್ಭವದ ಸರಪಳಿಯ ನಡುವಿನ "ಕಳೆದು ಹೋದ ಕೊಂಡಿ"ಗಳ (Missing links) ಸಂಕ್ಷಿಪ್ತ ಪರಿಚಯ. ಸಾವಿರಾರು ವರ್ಷಗಳ ಅವಧಿಯಲ್ಲಿ ಪರಿಸರ-ಬದುಕಿನ ಪ್ರೇರಣೆಗಳ ಒತ್ತಡ-ಒತ್ತಾಯಗಳಲ್ಲಿ ಈ ದ್ವಿಪಾದ ಪಶುಜೀವಿಗಳ ಮನಸ್ಸು ಉತ್ತರೋತ್ತರ ವಿಕಾಸಗೊಳ್ಳುತ್ತ ಮೇಧಾವಿಯಾಗಿ ಪ್ರಜ್ಞಾ ಪ್ರಗಲ್ಭ ವಾಯಿತು. ಡಾ. ಲಸ್ಮಿನೊವ್ಹ ಅನ್ನುವಂತೆ ಈ ಬಾಲವಿಲ್ಲದ ಹೆಗ್ಗೋಡಗ (Ape) ಗಳು ಒಳ್ಳೇ ಬುದ್ಧಿವಂತರು. ಅವು ಸಿಲುಕಿ ಬೀಳದಂತೆ, ತಮ್ಮ ಪಳೆಯುಳಿಕೆಯಾಗ ದಂತೆ ಜಪ್ಪಿಸಿ ತಪ್ಪಿಸಿಕೊಂಡು ಬದುಕುವವು.

ಈ ಬುದ್ಧಿವಂತಿಕೆಯೋ ಪ್ರಜ್ಞೆಯೋ ಈ 'ನರ' ನಲ್ಲಿ ಉದಿಸಿದ್ದು ಹೇಗೆ? ವಾನರ ಮಟ್ಟದ ತನಕ ತನ್ನ ಶರೀರದಲ್ಲಿಯೇ ಬದಲಾವಣೆ-ಸುಧಾರಣೆಗಳನ್ನು ಸಾಧಿಸಿಕೊಂಡು ಇಂದ್ರಿಯವನ್ನೋ ಅವಯವವನ್ನೋ ಕಳೆದುಕೊಂಡು ಇಲ್ಲವೆ ಬೆಳೆದುಕೊಂಡು ಪ್ರತಿಕೂಲ ಪರಿಸರಕ್ಕೆ ಅನುಕೂಲವಾಗಿಸಿ ಬದುಕಲು ತಕ್ಕ (fit) ದಾಗಿ ವಿಕಾಸಗೊಳ್ಳುತ್ತ ಬಂದ ಜೀವಿ ಅಥವಾ ಪ್ರಾಣಿ ಈ ವಾನರ ಹಂತದಲ್ಲಿ ಪ್ರಾಣ ಮಯದಿಂದ ಮನೋಮಯವನ್ನು ಮುಟ್ಟಿದಲ್ಲಿಂದ ಒಮ್ಮೆಲೆ-ಫಕ್ಕನೆ ಆ ಚಿತ್ ಶಕ್ತಿಯು ಹೊಸದೊಂದು ಸ್ಫುರಣವನ್ನು ಕಾಣಿಸಿಕೊಂಡು ಮುಂಗಾಲನ್ನೇ ತೋಳಾಗಿ-ಮುಂಗೈಯಾಗಿ ಬಳಸಿಕೊಳ್ಳುವ ಸಾಹಸಕ್ಕೆ ನೆಗೆಯಿತು-ನಿಲುಕಿತು.

ಇದು Mutation ಪ್ರಕ್ರಿಯೆ. ರಾಸಾಯನಿಕ ಕ್ರಿಯೆಗಳಲ್ಲಿ ಕೆಲವೊಮ್ಮೆ ಸಂಭವಿಸುವ ಕ್ರಿಯೆ. ಕ್ರಮ ವಿಪಾಕ-ವಿಕಾಸವನ್ನು "ದೊಡ್ಡ ದಾಪಿ"ನಲ್ಲಿ ಜಿಗಿದು ಮೇಲಿನ ಹಂತಕ್ಕೆ ಮುಟ್ಟುವ ಕ್ರಿಯೆ. ಆಕ್ಸಿಜನ್ ಮತ್ತು ಹೈಡ್ರೊಜನ್ ಬೆರೆತು ತಮ್ಮ ಉಭಯ ಗುಣಧರ್ಮಗಳನ್ನು ಮೀರಿದ ಅವುಗಳಿಗೆ ಹೊರತಾದ ವಿರುದ್ಧವೂ ಆದ ಹೊಸ ಗುಣಧರ್ಮದ ಹೊಸ ದ್ರವ್ಯ (ನೀರು)ವಾಗಿ ಮಾರ್ಪಟ್ಟಂತೆ !

ಪೋರ್ತುಗಾಲದಿಂದ ಸೀರಿಯಾದತನಕ ಏಶಿಯಾ ಮೈನರದಿಂದ ಪರ್ಶಿಯಾ ಕೋರಿಯಾದನಕ ಕಾಲಾಂತರದಿಂದ ಒದಗಿ ಬಂದ ನಾಗರಿಕತೆಯ ಹಾಗೂ ಅದಕ್ಕೆ ಆನುಷಂಗಿಕವಾಗಿ ಕೌಟುಂಬೀಕರಣ ಕೃಷಿ ಮುಂತಾದ ಘಟಕಗಳಿಗೆ ಮೂಲವಾದ ನರ-ಮಾನವೀಕರಣದ ಕ್ರಿಯೆ ಇತಿಹಾಸ ಪೂರ್ವದ ತೀರ ಪ್ರಾಚೀನ ಕಾಲದಲ್ಲಿ ಆಕಸ್ಮಿಕವಾಗಿ ಆರಂಭದದ್ದು ಈ Mutation ಮೂಲಕ. ಅಣುಗಳ ಸಂಖ್ಯೆ ಹೆಚ್ಚು ಕಡಿಮೆಯಾದೊಡನೆ ಬೇರೊಂದು ಲೋಹವೇ (ವಸ್ತುವೇ) ಮಾರ್ಪಟ್ಟಂತೆ-ಅಸಂಭವ ವವೆನಿಸಿದ್ದು ಆಕಾರಣವಾಗಿಯೇ ಹುಟ್ಟಿದಂತೆ !

ಈ ಬಗೆಯ ಆಕಸ್ಮಿಕ ಹಾಗೂ ಶೀಘ್ರ ಸ್ಥಿತ್ಯಂತರದಲ್ಲಿ ಒಂದು ಸೇಂದ್ರಿಯ ಸಾವಯುವ ಸಂರಚನೆ (Structure) ಒಂದು ಸಮತೋಲದ ಅವಸ್ಥೆಯಿಂದ ಒಮ್ಮೆಲೇ ಹೊಸದೊಂದು ಸಮತೋಲದ ಅವಸ್ಥೆಗೆ ಮುಟ್ಟಬಹುದು. ಇದು ಒಂದೇ ನೆಗೆತದ ಮಾರ್ಪಾಟು. "Discontinuous variation"–ವಿಚ್ಛಿನ್ನ ಸಾತತ್ಯದ ಪ್ರಕ್ರಿಯೆ. ಗುಣದಿಂದ ಪರಿಮಾಣಕ್ಕೆ-ಪರಿಮಾಣದಿಂದ ಗುಣಕ್ಕೆ ರೂಪಾಂತರಗೊಳ್ಳುವ "ಕ್ರಾಂತಿ" ತತ್ತ್ವವಿದು. ಉತ್ಕ್ರಾಂತಿ-ವಿಕಾಸದ ನಡುವೆಯೂ ಈ "ಉದ್ದ ಜಿಗಿತ" ಒದಗಿ ಬರುತ್ತದೆ.

೧೯೦೦ರಲ್ಲಿ ಪ್ರಾ.ಹ್ಯೂಜ ದಿ ವೆರೀ ಆಮಸ್ಟರಡ್ಯಾಂದಲ್ಲಿ ಸಂಶೋಧನ ನಿರತನಾಗಿರುತ್ತ ಈ ಸಿದ್ಧಾಂತವನ್ನು ಪ್ರತಿಪಾದಿಸಿದನು.

ಪ್ರಾಣಿ ಜಾತಿಗಳು ಒಂದರಿಂದ ಒಂದು ಈ ರೀತಿ ವಿಚ್ಛಿನ್ನ ಅಥವಾ ಅಖಂಡವಲ್ಲದ ಪ್ರಕ್ರಿಯೆಯಿಂದ ಉದಯಗೊಳ್ಳುತ್ತವೆ. ಡಾರ್ವಿನ್ ಉತ್ಕ್ರಾಂತಿ ತತ್ತ್ವ ಪ್ರತಿಪಾದನೆಯಲ್ಲಿ ನೈಸರ್ಗಿಕ ಆಯ್ಕೆಯ, ವೈಯಕ್ತಿಕ ಪ್ರತ್ಯೇಕ ಬದಲಾವಣೆ ಬೇರ್ಪಾಟುಗಳನ್ನು ಅವಲಂಬಿಸಿದನು. ಆದರೆ ಪ್ರಾ. ವೆರಿಯ ನಂಬುಗೆಯಂತೆ ಕೆಲ ಸಲ ಜನಕ ಜಾತಿಯಿಂದ ಯಾವುದೇ ತೋರಿಕೆಯ ತಯಾರಿ–ಸಿದ್ಧತೆ ಇಲ್ಲದೆ ಅವಸ್ಥಾಂತರದ ರೂಪಗಳ ಒಂದು ಸರಣಿಯು ಕಂಡು ಬರದೆ ಹೊಸ ಜಾತಿ(ಪ್ರಾಣಿವಂಶ) ಉದಯಗೊಂಡದ್ದು ಕಾಣುತ್ತೇವೆ. ಆದೇಕೆ ವಂಶ ಪಾರಂಪರ್ಯದಿಂದ ಪ್ರತಿ ಪೀಳಿಗೆಯಲ್ಲಿ ಹಿಂದಿನ ಪೀಳಿಗೆಯ ರೂಪ ಗುಣಧರ್ಮ ಸಾದೃಶ್ಯ ಹರಿದು ಬಂದರೂ ಪ್ರತಿ ಪೀಳಿಗೆ ತನ್ನದೇ ಆದ ಸತ್ತ್ವಯುಕ್ತವಾದ ಹೊಸ ವೈಶಿಷ್ಟ್ಯವನ್ನು–ವ್ಯಕ್ತಿತ್ತ್ವವನ್ನು ವ್ಯಕ್ತ ಪಡಿಸುತ್ತಿರುತ್ತದೆ. ಹೀಗೆ ಜೀವಜಾತಿಯ ಉಗಮದಲ್ಲಿ ಪಿತೃವಂಶವನ್ನೂ ಮೀರಿದ ಮಾರ್ಪಾಟ ಬೇರ್ಪಾಟ ಪೂರ್ವ ಸಂಸ್ಕಾರವಿಲ್ಲದೆ ಕಾಣಿಸಿಕೊಳ್ಳುತ್ತದೆ. ಇದರಿಂದ ಪ್ರಾಣಿಯ ವಿಕಾಸ ಹೊಸ ಹಂತವನ್ನು ನಿಲುಕುತ್ತದೆ.

ಇದೇನು ಆಧ್ಯಾತ್ಮಿಕ ಶಕ್ತಿಯ ಅಥವಾ ಅತಿ ಮಾನಸ ಪಾತಳಿಯ ಪ್ರೇರಣೆಯ ಧಿಡೀರು ಪ್ರವೇಶವೆಂದು ಭಾವಿಸಲೇ ಬೇಕೆಂತಿಲ್ಲ. ಪ್ರಾಣಮಯ ಪಾತಳಿಯಿಂದಲೇ ಮನೋಮಯ ಅಥವಾ ಪ್ರಜ್ಞಾಮಯ ಪಾತಳಿಗೆ ಹಾಯುವ ವಾನರ ನರಯೋನಿಯಿಂದ "ಮಾನವ ಜನ್ಮ ದೊಡ್ಡದು" ಪಡೆಯುವನು.

**ಕೋಹ್ಲರನ** ಪ್ರಯೋಗಗಳಿಂದ ವಾನರನು ವಿಶಿಷ್ಟ ಪೇಚಿನ ಸಂದರ್ಭದಲ್ಲಿ ಸ್ವಯಂಸ್ಫೂರ್ತ ಪ್ರಜ್ಞೆ (ಒಳನೋಟ) ದಿಂದ (With spontaneous insight) ವರ್ತಿಸುವನೆಂದು ಸಿದ್ಧವಾಗಿದೆ. ಅವನ ಪ್ರಯೋಗದಲ್ಲಿ ಆ ಹೆಗ್ಗೋಡಗ ಕೈ ಚಾಚಿದರೆ ನಿಲುಕದ ಬಾಳೆಯ ಗೊನೆಯನ್ನು ಹತ್ತಿರದಲ್ಲಿಯೇ ಕೋಹ್ಲರ ಬಿಟ್ಟು ಹೋದ ಬಡಿಗೆಯನ್ನು ಹಿಡಿದು ಬೀಸಿ ಕೆಡುಹಿ ತಿಂದಿತು! ಹೀಗೆ ಸನ್ನಿವೇಶವನ್ನು ಸಾಕಲ್ಯದಿಂದ ಗ್ರಹಿಸಿ ಫಕ್ಕನೆ ಬೇರೆ ಬೇರೆ ಸಂಗತಿಗಳ ನಡುವೆ ಒಂದು ಕ್ರಿಯಾ

ಸಂಬಂಧವನ್ನು ಸಾಹಚರ್ಯದಿಂದ ವಾನರ ಬುದ್ಧಿಯೂ ಕಾಣಬಲ್ಲದು. ಇದುವೆ, ತಪ್ಪಿ–ತಿದ್ದಿ ಅನುಭವದಿಂದ ವಿಕಾಸಗೊಂಡು ಮಾನವನ ಪ್ರಜ್ಞೆ ಮೇಧಾ ಶಕ್ತಿಯಾಗಿ ಬೆಳೆಯಿತು. ಇರಲಿ.

ತಾತ್ಪರ್ಯವೇನೆಂದರೆ ಪ್ರವೃತ್ತಿ, ಅಂತಃಪ್ರೇರಣೆ intution–inspiration ಇತ್ಯಾದಿ ಎಲ್ಲ ಸ್ವತಂತ್ರ ಸ್ವಯಂಭೂ ಅಥವಾ ಮರ್ತ್ಯಪ್ರಪಂಚದ "ಆಚೆಯ" ಶಕ್ತಿಯೋ–ಧರ್ಮವೇ ಎಂದು ಭಾವಿಸಲೇ ಬೇಕಾಗಿಲ್ಲ. ಆದರೆ ಉತ್ಕ್ರಾಂತಿಯ ಏರಿನ ದಾರಿಯಲ್ಲಿ ವಾನರ–ನರ–ಮನುಷ್ಯ ಎಂಬ ತಾರತಮ್ಯದ ಪಾತಳಿ–ಪ್ರಪಂಚ ನಿಖರವಾಗಿಯೇ ನೆಲೆ ನೆಲೆಯಾಗಿ ನಿಂತಿದೆಯೆಂಬುದು ಮಾತ್ರ ನಿಜ.

---

# ಜೀವನ ಮತ್ತು ಜೀವಿತ : ಐರೋಪ್ಯ ದೃಷ್ಟಿಯಲ್ಲಿ

**ವೇಣುಗೋಪಾಲ ಸೊರಬ**

Unanalysed life is not worth living

—Socretes

ಜೀವನ ಮತ್ತು ಜೀವಿತ ಎಂಬ ಪರಿಕಲ್ಪನೆಗಳಲ್ಲಿ ಜೀವಿತಕ್ಕಿಂತ ಜೀವನ ದೊಡ್ಡದು. ಜೀವಿತಕ್ಕಾಗಿ ಹೋರಾಟ (Struggle for existence) ಎಂಬ ಮಾತಿನಲ್ಲಿ ನಮಗೆ ಕ್ಷಣ ಕ್ಷಣದ ಬದುಕಿನ ಜಂಜಾಟ (ಹೋರಾಟ)ವೇ ಮುಖ್ಯವೆನಿಸಿ, ನಾವು ಇಡೀ ಜೀವನವೆಂದರೇನು ? ಜೀವನದ ಉದ್ದೇಶವೇನು ? ಎನ್ನುವುದನ್ನು ಗಮನಿಸದೇ ಹೋಗುತ್ತೇವೆ. ವಿಲಿಯಂ ವರ್ಡ್ಸ್‌ವರ್ಥನ 'The world is too much with us'[1] ಎನ್ನುವ ಮಾತೂ ಸಹ ನಾವು ಜೀವನವನ್ನು ನಿರ್ಲಕ್ಷಿಸಿದ್ದೇವೆ ಎಂಬ ಗಹನ ವಿಚಾರವನ್ನೇ ಧ್ವನಿಸುತ್ತದೆ.

"Getting and spending ; We lay waste our powers" ಎನ್ನುವ ಆತನ ಮಾತಿನಲ್ಲಿ ಸಹ, ನಾವು ಯಾವುದರ ಬಗ್ಗೆ ಕಾಳಜಿ ವಹಿಸಬೇಕೋ, ಅದರ ಕಡೆಗೆ ಲಕ್ಷ್ಯವಹಿಸುತ್ತಿಲ್ಲ ಎಂಬ ಅರ್ಥವೇ ಹೊರಡುತ್ತದೆ. ವರ್ಡ್ಸ್‌ವರ್ಥ ಮುಂದುವರಿದು ಹೇಳುತ್ತಾನೆ.

"Little we see in Nature that is ours"

ಅಂದರೆ ಪ್ರಕೃತಿ ಮತ್ತು ಮನುಷ್ಯ ಈ ಎರಡರ ನಡುವೆ ಸಮಾಶ್ರುತಿ ಸಮಭಾವ ಇಲ್ಲವಾಗಿವೆ. ವರ್ಡ್ಸ್‌ವರ್ಥನ ದೃಷ್ಟಿಯಲ್ಲಿ ಪ್ರಕೃತಿ ಮತ್ತು ಮನುಷ್ಯನೊಡನೆ ಉಂಟಾದ ವಿರಸದಿಂದಲೇ ಮಾನವನ ಅವನತಿ ಉಂಟಾಗಿದೆ. ಆದರೆ ಮನುಷ್ಯ ಪ್ರಕೃತಿ ಆರಾಧನೆಗೆ ತೊಡಗಿಸಿಕೊಂಡಾಗ, ಆತ ಸಹ ಮಾನವರಿಂದ ವಿಮುಖನಾಗುವ ಸಾಧ್ಯತೆ ಇದೆ. ಹಾಗಿದರೆ ಮನುಷ್ಯ-ಮನುಷ್ಯರ ನಡುವಣ ಸಂಬಂಧವೂ ಅತ್ಯಂತ ಮುಖ್ಯವಾದದ್ದು ಎನ್ನುವದನ್ನು ಆತ, ತನ್ನ ಸಹೋದರಿ ಡಾರೊತಿ ಬಗ್ಗೆ 'ಟಿಂಟರ್ನ ಅಬಿ' ಕವನದಲ್ಲಿ ಹೇಳುವ ಮಾತುಗಳಿಂದ ಕಂಡುಕೊಳ್ಳಬಹುದಾಗಿದೆ

"............I have felt  
A presence that disturbs me with the joy  
Of elevated thoughts ; a sense sublime  
Of something far more deeply interfused  
Whose dwelling is light of setting suns,

---

1 The Oxford Book of English Verse of Romantic Period (1798-1837) Page 107

And the round Ocean and the living air,
And the blue sky; *and the mind of Man*:
A motion and a spirit, that impels
All thinking things, all objects of all thought
And rolls through all things."[2]

ವರ್ಡ್ಸ್‌ವರ್ಥನ ಈ ಮಾತುಗಳಲ್ಲಿ ಇಡೀ ವಿಶ್ವನಿಯತಿಯನ್ನು ಮಾನವ ಜೀವನದೊಂದಿಗೆ ಬೆಸೆದಿರುವುದನ್ನು ಕಾಣುತ್ತೇವೆ. ಆದರೆ ವಿಶ್ವಸೂತ್ರಗಳೊಂದಿಗೆ ಮಾನವನನ್ನು ಬೆಸೆಯುವಾಗ ಮನುಷ್ಯ ಮನುಷ್ಯರ ನಡುವಿನ ಸಂಬಂಧ ಕೂಡ ಮಹತ್ವವನ್ನು ಪಡೆಯಬೇಕೆನ್ನುವುದು ಇಲ್ಲಿ ಗಮನಾರ್ಹವಾದ ಅಂಶವಾಗಿದೆ.

ಪ್ರಕೃತಿಯೇ ಆಗಲಿ, ವ್ಯವಹಾರ ಪ್ರಪಂಚವೇ ಆಗಲಿ, ಮನುಷ್ಯ-ಮನುಷ್ಯರ ಸಂಬಂಧಗಳನ್ನು ಕುದುರಿಸಲಿಕ್ಕಾಗಿಯೇ ಇರಬೇಕು. ವ್ಯವಹಾರ ಪ್ರಪಂಚದ ಬೆಳವಣಿಗೆಗಳು ಬೆಳೆಯುತ್ತ ಹೋದಂತೆ ಮನುಷ್ಯ ಮನುಷ್ಯರ ನಡುವಿನ ಸಂಬಂಧ ಕೂಡ ಹೆಚ್ಚು ಹೆಚ್ಚು ಆರ್ದ್ರತೆಯನ್ನು ಕಳೆದುಕೊಳ್ಳುತ್ತಾ ಹೋಗುತ್ತದೆ. ಇಪ್ಪತ್ತನೆಯ ಶತಮಾನದಲ್ಲಂತೂ ಈ ವಾಣಿಜ್ಯ ಪ್ರಪಂಚ ಮನುಷ್ಯ ಸಂಬಂಧವನ್ನೇ ಪೂರ್ತಿ ನುಂಗಿ ನೊಣೆದು ಹಾಕುತ್ತದೆ. ಈ ಶತಮಾನದ ಮೇಧಾವಿ ಕವಿಯಾದ ಟಿ. ಎಸ್. ಎಲಿಯಟ್, ಆಧುನಿಕ ಮಾನವನ ದುರಂತವನ್ನು ಚಿತ್ರಿಸುತ್ತಾ,

I have measured out my life with coffee spoons"[3]

ಎನ್ನುವಲ್ಲಿ ಈ ದುರಂತದ ಅಗಾಧತೆಯನ್ನು ಬಿಂಬಿಸುತ್ತಾನೆ. ವ್ಯಕ್ತಿಕೇಂದ್ರಿತವಾದ ಪ್ರಪಂಚವನ್ನು ಬಹುವಾಗಿ ಒಪ್ಪಿಕೊಂಡಿದ್ದ ಎಲಿಯಟ್ ಮಾನವ ದುರಂತವನ್ನು ಹೀಗೆ ಚಿತ್ರಿಸಿದ್ದು ಸಹಜವೇ ಆಗಿದೆ. ಅಂದರೆ ಈ ದುರಂತ ಚಿತ್ರಣದ ಹಿಂದೆ ಸಮಷ್ಟಿಯ ನೋವು ವ್ಯಕ್ತವಾಗುವದಕ್ಕಿಂತ ಹೆಚ್ಚಾಗಿ ವ್ಯಕ್ತಿಗೇ ಪ್ರಾಮುಖ್ಯತೆ ದೊರೆತಿದೆ.

ಆದರೂ ಆಧುನಿಕ ಮಾನವನ ದುರಂತವನ್ನು ಹೇಳುವ ಕೆಳಗಿನ ಸಾಲುಗಳಲ್ಲಿ, ಎಲಿಯಟ್ ಈ ಬಗ್ಗೆ ಸಾಕಷ್ಟು ಆಲೋಚನೆಯನ್ನು ಮಾಡಿದ್ದನೆಂದು ತಿಳಿಯಬಹುದು :

---

2 The oxford book of English Verse of the Romantic Period (1798-1837) Page .

3 Selected Poems of T.S. Eliot : The Love song of Prufrock Page 13.

"Where is the Life we have lost in living?
Where is the wisdom we have lost in knowledge?
Where is the knowledge we have lost in
information ?"[4]

ಬಹಳ ಮಟ್ಟಿಗೆ ಪಾಶ್ಚಾತ್ಯ ಸಂಸ್ಕೃತಿಯನ್ನು ಅನುಸರಿಸುತ್ತಿರುವ ಎಲ್ಲರ ದುರಂತವೂ ಈ ಸಾಲುಗಳಲ್ಲಿ ಮಡುಗಟ್ಟಿದೆ. ಹೀಗೆ ಜೀವನ ದುರಂತಮಯವಾಗ ಬೇಕಾದರೆ ಬಹಳವಾಗಿ ವ್ಯಕ್ತಿ ಜೀವನದ ದುರಂತವೇ ಕಾರಣ.

ಯಾಂತ್ರೀಕರಣ, ಔದ್ಯಮೀಕರಣ–ಇವುಗಳ ಪರಿಣಾಮವಾಗಿ, ಕುಟುಂಬಗಳು ಛಿದ್ರಗೊಂಡದ್ದರ ಪರಿಣಾಮವಾಗಿ ವ್ಯಕ್ತಿಕೇಂದ್ರಿತ ವ್ಯವಸ್ಥೆಗೆ ಪ್ರಾಧಾನ್ಯ ಉಂಟಾಗಿರುವುದು ಇಂದು ಕಂಡು ಬರುತ್ತಿರುವ ಒಂದು ಮುಖ್ಯ ಬೆಳವಣಿಗೆ. ಆದರೆ ಹಿಂದಿನ ಕಾಲದಲ್ಲಿ ವ್ಯಕ್ತಿಕೇಂದ್ರಿತ ತತ್ತ್ವಕ್ಕೆ ಬೆಲೆ ಇರಲೇ ಇಲ್ಲವೆಂದು ಹೇಳುವಂತಿಲ್ಲ. ಆದರೆ ಆಗ ವ್ಯಕ್ತಿಕೇಂದ್ರಿತ ವ್ಯವಸ್ಥೆಗೆ ಪ್ರಾಮುಖ್ಯ ಬಂದಿದ್ದರೆ, ಅದಕ್ಕೆ ಕಾರಣ, ವ್ಯಕ್ತಿಯ ನೋವು–ನಲಿವುಗಳೇ ಆಗ ಮುಖ್ಯವೆನಿಸಿದ್ದವು. ಬಹುಶಃ ಸಾಕ್ರಟೀಸನಂತಹ ಮೇಧಾವಿಗಳು ತರುಣರನ್ನು ಪ್ರಜ್ಞಾವಂತರನ್ನಾಗಿ ಮಾಡಲು ಹೊರಟಿದ್ದನ್ನು ಈ ಹಿನ್ನೆಲೆಯಲ್ಲಿ ವಿವೇಚಿಸಬೇಕು. ಕೇವಲ ಸ್ವಾರ್ಥಮೂಲವಾದ ಚೌಕಟ್ಟಿನ ಹೊರಗೆ ಹೇಗೆ ಚಿಂತನೆ ಮಾಡಬೇಕೆನ್ನುವುದನ್ನು ಆತ ತನ್ನ ಶಿಷ್ಯರಿಗೆ ಪ್ರಶ್ನೆಗಳನ್ನು ಕೇಳುವುದರ ಮೂಲಕ, ತಿಳಿಸಿ ಹೇಳಿದ. ಆದರೆ ಅಂದಿನ ಗ್ರೀಕ ವರಿಷ್ಠರಿಗೆ (ಇಂದಿನ ವರಿಷ್ಠರಿಗಿಂತ ಅವರು ಬೇರೆ ಆಗಿರಲಿಲ್ಲ) ಅದು ರಾಷ್ಟ್ರ ವಿರೋಧಿ ಕೃತ್ಯವಾಗಿ ಕಂಡು ಬಂದಿತು. ಸಾಕ್ರಟಿಸನ ವಿರೋಧಿಗಳಿಗೆ ಬೇಕಾದದ್ದು ಸಂಪೂರ್ಣ ಶರಣಾಗತಿಯೇ, ಹೊರತು ವಿಚಾರಪರ ದೃಷ್ಟಿ ಅಲ್ಲ. ಇದು ಎಲ್ಲ ಕಾಲದ ದುರಂತ. ಲಾಭಕ್ಕಾಗಿ, ಅದೂ ಈ ಗಳಿಗೆಯ ಲಾಭಕ್ಕಾಗಿ ದುಡಿಯುವದು ಆಧುನಿಕತೆಗೆ ಅಂಟಿ ಬಂದಿರುವ ಗೀಳು. ಒಬ್ಬ ಮನುಷ್ಯ ತನ್ನ ಜೀವಿತ ಕಾಲದಲ್ಲಿ ಎಷ್ಟು ಹಣ ಮಾಡಿದ ? ಸಾಯುವಾಗ ಎಷ್ಟು ಬಿಟ್ಟು ಹೋದ ? ಎನ್ನುವುದೇ ಅಳತೆಗೋಲಾಗುವದಕ್ಕೆ ಕಾರಣ ಇಂತಹ ಲಾಭ ಕೋರತನವೇ ಆಗಿದೆ.

ಇತ್ತೀಚೆಗೆ ಬೆಳೆದು ಬಂದ ಅಸ್ತಿತ್ವವಾದ ಕೂಡ ಜೀವನವನ್ನು ಸಮಗ್ರವಾಗಿ ನೋಡದೇ ಸೂಕ್ಷ್ಮದರ್ಶಕದ ಕೆಳಗೆ ಪರೀಕ್ಷೆಗೆ ಒಳಪಡಿಸಲ್ಪಟ್ಟ ಒಂದು ಕಣದಂತೆ ಜೀವನವನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತದೆ. ಕ್ಷಣ ಕ್ಷಣದ ಅನುಭವದ ನೆಲೆಯಲ್ಲಿ ಬದುಕಿನ ಗೂಢಗಳನ್ನು ಮರೆತೇ ಬಿಡುವ, ಇಲ್ಲವೇ ನಿರ್ಲಕ್ಷಿಸುವ ಅಸ್ತಿತ್ವವಾದ ವಾಸ್ತವಿಕವಾಗಿ ಒಂದು ದೊಡ್ಡ ಆಘಾತವೇ ಸರಿ ಎನ್ನಬೇಕು. ತಾತ್ತ್ವಿಕ ಬೆಳವಣಿ

---

4 Selected Poems of T.S. Eliot : Choruses from the Rock Page 107.

ಗೆಯ ದೃಷ್ಟಿಯಿಂದ ಅಂತಹ ಒಂದು ಬೆಳವಣಿಗೆ ಅನಿವಾರ್ಯವಾಗಿ ಕಾಣಬರಬಹುದೇನೋ ! ಆದರೆ, ಈ ವಾದವನ್ನೇ ಸಂಪೂರ್ಣವಾಗಿ ಅಪ್ಪಿಕೊಂಡಲ್ಲಿ ಬದುಕು ಸೂತ್ರ ಬದ್ಧವಾಗಿ ಉಳಿಯದೇ ಅಸ್ತವ್ಯಸ್ತವಾಗಿ ಹರಡಿದ ಕಣಗಳಂತೆ, ಏಕಮುಖತೆಯನ್ನು ಸಹ ಅದು ಕಳೆದುಕೊಳ್ಳುತ್ತದೆ.

'ಜೀವನ ಮತ್ತು ಜೀವಿತ' ಎಂಬ ಪರಿಕಲ್ಪನೆಗಳು ಆಲ್ಬರ್ಟ್ ಐನ್‌ಸ್ಟೈನರಂತಹವರ ದೃಷ್ಟಿಯಲ್ಲಿ ಏಕೀಭವಿಸುತ್ತ ಹೋಗುತ್ತವೆ. ಕಾಲದೇಶಗಳೆಂಬ ಮೂಲ ಮಾನಗಳು ಒಂದೇ ಘಟಕವೆಂದು ಪರಿಭಾವಿಸುವ ಐನ್‌ಸ್ಟೈನ್‌ರಂತಹ ವಿಜ್ಞಾನಿ, ವಿಜ್ಞಾನ-ತತ್ತ್ವಜ್ಞಾನಗಳನ್ನು ಒಂದೇ ಪಾತಳಿಗೆ ಒಯ್ಯುತ್ತಾನೆ. ಆದ್ದರಿಂದಲೇ ಜೀವಿತ ಎನ್ನುವುದು ಪ್ರಾಶಸ್ತ್ಯ ಕಳೆದುಕೊಂಡು, ಜೀವನವೇ ಸರ್ವವ್ಯಾಪಿಯಾಗುತ್ತದೆ. ಜೀವಿತ ಎನ್ನುವುದರ ಅರ್ಥ ಎಲ್ಲಿಯವರೆಗೆ ಜೀವನದ ಮಹತ್ವವನ್ನು ಅಲ್ಲಗಳೆಯುತ್ತಾ ಹೋಗುತ್ತದೆಯೋ ಅಲ್ಲಿಯವರೆಗೂ ನಾವು ಬೆಳಕಿನ ಪಥ ಅನುಸರಿಸುವುದು ಕೇವಲ ಕನಸಾಗುತ್ತದೆ. ಈ ಎಲ್ಲ ಹಿನ್ನೆಲೆಯಲ್ಲಿ ಜೀವನದ ವೈಶಾಲ್ಯಕ್ಕೆ ಕೊಟ್ಟುಕೊಳ್ಳುವ ಹಾಗೆ ವ್ಯಕ್ತಿಯ ಬದುಕು ಹರಡಿಕೊಳ್ಳುವ ದಿಕ್ಕಿನಲ್ಲಿ ಮಾನವಕುಲ ಮುಂದುವರಿಯಲಿ ಎಂದಷ್ಟೇ ಈಗ ಹಾರೈಸಬಹುದಾಗಿದೆ.

ಅನುಬಂಧ :

ಇಂಗ್ಲಿಷಿನಲ್ಲಿ 'ಜೀವನ ಮತ್ತು ಜೀವಿತ'ವನ್ನು ನಿರ್ದೇಶಿಸುವ ಪದಗಳೆಂದರೆ Life ಮತ್ತು Existence. ಈ ಪದಗಳ ವ್ಯುತ್ಪತ್ತಿ ಹೀಗಿದೆ.

Life : Old English> Old Saxon> Old Norse > Old High German 'lib'–Life (body) From Germanic Libham.f. libh (Live)

Existence : Middle English, from old French, from Late Latin existentia, from Latin Existence, from stance : stand.

ಅಂದರೆ ಮೂಲ ಇಂಗ್ಲಿಷಿನ Life (ಜೀವನ) ಪದ ಸಾಚಾತನಕ್ಕೆ ಸಮೀಪವಾಗಿದ್ದರೆ, ಇಡೀ ದೇಹದ ಮೂಲದ ಅಸ್ತಿತ್ವವನ್ನು ಸೂಚಿಸಿದರೆ, *Existence* (ಜೀವಿತ) ಎನ್ನುವುದು ಕೇವಲ ನಿಲ್ಲುವುದರ ಚಿಹ್ನೆಯಾಗಿರುವದು ಗಮನಾರ್ಹ.

ಆದರೆ ಅಚ್ಚ ಕನ್ನಡ ಪದಗಳಾದ ಬದುಕು ಬಾಳುವೆಗಳು ಹೀಗೆ ಬೇರೆ ಬೇರೆ ಅರ್ಥಚ್ಛಾಯೆಯನ್ನು ಕೊಡದಿರುವುದನ್ನು ನಾವಿಲ್ಲಿ ಗಮನಿಸಬೇಕು. ಸಂಸ್ಕೃತ ಪದಗಳಾದ ಜೀವನ ಮತ್ತು ಜೀವಿತಗಳೂ ಹೀಗೆಯೇ ಇರಲು ಸಾಧ್ಯ. ಆದರೆ ಅನುಕೂಲಕ್ಕಾಗಿ ಶಾಂತ್ರಿಕವಾಗಿ ಅವುಗಳನ್ನು ಬೇರೆ ಅರ್ಥ ಸೂಚಿಸಲು ಬಳಸಲಾಗಿದೆ.

---

# ಜೀವನ-ಜೀವಿತ : ಭಾರತೀಯ ದೃಷ್ಟಿಯಲ್ಲಿ
## ಒಂದು ಟಿಪ್ಪಣಿ

ಮಲ್ಲೇಪುರಂ ಜಿ. ವೆಂಕಟೇಶ

ಐರೋಪ್ಯರ ದೃಷ್ಟಿಯಲ್ಲಿ 'ಜೀವನ–ಜೀವಿತ'ಕ್ಕಿರುವ ಭೇದವನ್ನು ಕುರಿತು ಈ ಮೊದಲಿನ ಲೇಖನದಲ್ಲಿ ಪ್ರಸ್ತಾಪಿಸಿದ್ದರೆ ಭಾರತೀಯರ ಪರಿಕಲ್ಪನೆಯ ಪ್ರಕಾರ 'ಜೀವನ–ಜೀವಿತ'ಕ್ಕಿರುವ ಭೇದವನ್ನು ತಿಳಿಸುವುದು ಇದರೊಡನೆ, ಅಗತ್ಯವಾಗುತ್ತದೆ. ನಾವು ಇಂದು ಬಳಸುತ್ತಿರುವ ಸಾಹಿತ್ಯ ವಿಮರ್ಶೆ, ಸಾಂಸ್ಕೃತಿಕ ಅಧ್ಯಯನ, ಧರ್ಮ–ದರ್ಶನಶಾಸ್ತ್ರಗಳಲ್ಲಿ ಇವೆರಡಕ್ಕೂ ಇರುವ ಭೇದವನ್ನು ನಾವು ಪರಿಗಣಿಸುತ್ತಿಲ್ಲದಿರುವುದು ನಮಗೆ ಸ್ಪಷ್ಟವಾಗಿದೆ. ಹಿಂದಿನ ಸಾಹಿತ್ಯದಲ್ಲಿ ಕೂಡ ಇವೆರಡರ ತಾರತಮ್ಯವನ್ನು ನಷ್ಟ ಪಡಿಸಿರುವ ಉಲ್ಲೇಖಗಳೂ ಉಂಟು.

ಭಾರತೀಯ ಪ್ರಾಚೀನ- ನಿಘಂಟು, ಕೋಶಗಳಲ್ಲಿ ಜೀವನ–ಜೀವಿತಕ್ಕಿರುವ ಭೇದವನ್ನು ಕ್ವಚಿತ್ತಾಗಿ ಪರಿಗಣಿಸಲಾಗಿದೆ. ಕ್ರಿ.ಶ. ೪೫೦ ರಲ್ಲಿದ್ದ ಅಮರಕೋಶ ಬರೆದ ಅಮರಸಿಂಹನು ತನ್ನ ಕೋಶದಲ್ಲಿ "ಜೀವನ" ಶಬ್ದದಿಂದ ಸಾಧಿತವಾದ ಉಳಿದ ಶಬ್ದಗಳನ್ನು ಹೇಳಿದ್ದಾನೆ. ಅವು ಕ್ರಮವಾಗಿ ಹೀಗಿವೆ :

**ಜೀವನಂ :**

ಪಯಃ ಕೀಲಾಲಂ ಅಮೃತಂ **ಜೀವನಂ** ಭುವನಂ
'ನೀರು' ಎಂಬ ಅರ್ಥ [ವಾರಿವರ್ಗ I–259]

**ಜೀವನೀ :**

ಜೀವಂತೀ **ಜೀವನೀ** ಜೀವಾ ಜೀವನೀಯಾ ಮಧುಸ್ರವ
'ಸೀಹಾಲು' ಎಂಬ ಅರ್ಥ [ವನೌಷಧಿವರ್ಗ II–191]

**ಜೀವನೇ :**

ಆಜೀವೋ ಜೀವಿಕಾ ವಾರ್ತಾ ವೃತ್ತಿಃವರ್ತನ **ಜೀವನೇ**
'ಜೀವನೋಪಾಯ'ಎಂಬ ಅರ್ಥ [ಕ್ಷತ್ರಿಯವರ್ಗ II-586]

**ಜೀವನೌಷಧಂ :**

**ಜೀವಾತುರ್ಜೀವನೌಷಧಂ**
ಬದುಕಿಸುವ ಮದ್ದು ಎಂಬ ಅರ್ಥ[ಕ್ಷತ್ರಿಯವರ್ಗ]I-585]

**ಜೀವಂತಿಕಾ :**

**ಜೀವಂತಿಕಾ** ಸೋಮವಲ್ಲೀ ವಿಶಲ್ಯಾ ಮಧುಂ ಪರ್ಣ್ಯಪಿ
'ಅಮೃತಬಳ್ಳಿ' ಎಂಬ ಅರ್ಥ [ವನೌಷಧಿವರ್ಗ II-132]

**ಜೀವಿತಕಾಲ :**

ಆಯುರ್ಜೀವಿತ ಕಾಲೋ
'ಬದುಕಿರುವ ಕಾಲ' [ಕ್ಷತ್ರಿಯವರ್ಗ II-585]

ಈ ಮೇಲಿನ ಪದಗಳಲ್ಲಿ 'Life'ಎಂಬ ಅರ್ಥಕೊಡುವ ವಿಶಾಲವಾದ ಅರ್ಥವು ಇಲ್ಲದಿರುವುದನ್ನು ಕಾಣಬಹುದು. 'ಜೀವಿತ'ಕ್ಕೆ ಸಂಬಂಧಿಸಿದ ಹಾಗಿರುವ ಪದಗಳು ಮಾತ್ರ ಇಲ್ಲಿ ಕಾಣಬಹುದು. ಇನ್ನು ಮೋನಿಯರ್ ವಿಲಿಯಂಸ್‌ನ ಕೋಶ ಈ ವಿಷಯದಲ್ಲಿ ಏನು ಹೇಳುತ್ತದೆ ನೋಡೋಣ :

ಜೀವನ :

**Vivifying, giving life, enlivening.**
ಶತಪಥ ಬ್ರಾಹ್ಮಣದಲ್ಲೂ ೧೧-೩, ೧, ೧೦ **a living being** ಇರುವುದನ್ನು ನಮೂದಿಸಿದ್ದಾನೆ.

   

ಜೀವನ-ಜೀವಿತ ಇವೆರಡಕ್ಕೂ ಸಾಂಸ್ಕೃತಿಕ ಪರಿಭಾಷೆಯಲ್ಲಿ ಬಹಳ ಮಹತ್ವ ಉಂಟು. ಜೀವನ ಎಂಬುದು ಸಮಾಜ ಪುರುಷನಷ್ಟು ದೊಡ್ಡದು ಇರುತ್ತದೆ; ಜೀವಿತ ಮಾತ್ರ ಆಯುರ್ಮಾನದಷ್ಟು ಇರುತ್ತದೆ. ಜೀವನಕ್ಕೆ ಸಾತತ್ಯ, ಸಾಂಗತ್ಯ, ನಾಳೆಯ ಗತಿಯುಂಟು; ಜೀವಿತಕ್ಕೆ ನಿನ್ನೆ ಮತ್ತು ಇಂದಿನ ಗಮನವುಂಟು. ಜೀವನ ಎಂಬುದಕ್ಕೆ ಇಂಗ್ಲಿಷ ಸಂವಾದಿ ಪದ ಎಂದರೆ 'Life' 'ಜೀವಿತ' ಎಂಬುದಕ್ಕೆ 'Existence' ಎಂಬುದು ಸಂವಾದಿ ಶಬ್ದವಾಗಿದೆ. ವೇದಗಳ ಕಾಲದಿಂದ ನಾವು ಈ ಎರಡು ಪದಗಳಿಗಿದ್ದ ಅರ್ಥ-ಸ್ವಾರಸ್ಯ ಮತ್ತು ಸ್ವರೂಪವನ್ನು ತಿಳಿಯೋಣ. ಜೀವನ-Life ಎಂಬ ಅರ್ಥದಲ್ಲಿ ಸುಮಾರು ಹತ್ತುಬಾರಿ ಪ್ರಯೋಗವಾಗಿದೆ. ಆದರೂ ಇವುಗಳಲ್ಲಿ ಅನೇಕವು 'ಜೀವಿತದ' ಮಟ್ಟಕ್ಕೆ ಬಂದು ಉಳಿಯುತ್ತವೆ. ಉದಾ : 'ಬಹುಧಾ **ಜೀವತೋ** ಮನಃ' X-164-1, ಜೀವಿಸುತ್ತಿರುವ ಮನಸ್ಸು ಅನೇಕ ವಿಷಯಗಳಲ್ಲಿ ಆಸಕ್ತವಾಗಿರುತ್ತವೆ. 'ಭದ್ರಂ ವೈವಸ್ವತೇ ಚಕ್ಷುಃ ಬಹುತ್ರಾ **ಜೀವತೋ** ಮನಃ' X-164-2. ವೈವಸ್ವತನ ಮಂಗಳಕರ ದೃಷ್ಟಿ ಬೇಕು. ಜೀವಿಸುತ್ತಿರುವ ಮನಸ್ಸು ಅನೇಕ ವಿಷಯಗಳಲ್ಲಿ ವರ್ತಿಸುತ್ತಿರಬೇಕು. ಮುಂಚಾಮಿ ತ್ವಾ ಹವಿಷಾ ಜೀವನಾಯ ಕಂ ಅಜ್ಞಾತ ಯಕ್ಷ್ಮಾದುತ ರಾಜ ಯಕ್ಷ್ಮಾತ್ X-161-1.ಜೀವಿಸುವುದಕ್ಕಾಗಿ, ಅಜ್ಞಾತ ಮತ್ತು ಜ್ಞಾತ ಕ್ಷಯ ರೋಗದಿಂದ ನಿನ್ನನ್ನು ಮುಕ್ತನನ್ನಾಗಿಸು

ತ್ತೇನೆ. ನಮ್ಮ ಭಾರತೀಯ ಜನರು ಜೀವನ ಮತ್ತು ಜೀವಿತದ ಸ್ಥಾನ ಭೇದಗಳನ್ನು ಗಣಿಸಲಾರದೆ ಹೋದರು. ಇನ್ನು ಗೀತೆಯಲ್ಲಿರುವ :

**ಜೀವನಂ** ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು

[ಎಲ್ಲಾ ಪ್ರಾಣಿಗಳಲ್ಲಿ ಜೀವನ ಮತ್ತು ತಪಸ್ವಿಗಳಲ್ಲಿ ತಪಸ್ಸು ಆಗಿರುವೆನು]

ಮೋಘಂ ಪಾರ್ಥ ಸ **ಜೀವತಿ**

[ಅವನು ವ್ಯರ್ಥವಾಗಿ ಜೀವಿಸಿರುತ್ತಾನೆ III-೧೬]

ಮದರ್ಥೇ ತ್ಯಕ್ತ **ಜೀವಿತಾಃ**

[ನನಗಾಗಿ ಪ್ರಾಣ ತ್ಯಾಗವಮಾಡಲು ಸಿದ್ಧರು I.೯]

ಕಿಂ ಭೋಗೈಃ ಜೀವಿತೇನ ವಾ

[ಭೋಗದಿಂದ ಅಥವಾ ಜೀವಿತದಿಂದ ಏನು ? I-೩೨]

ಇನ್ನು ರಾಮಾಯಣದಲ್ಲಿರುವ ಈ ಮಾತನ್ನು ಕೇಳಿ :

ಕಿಂ ಕಾರ್ಯಂ **ಜೀವಿತೇನ** ವಾ

[ಇನ್ನು ಜೀವಿಸಿ ಏನು ಮಾಡಬೇಕು-ಯುದ್ಧಕಾಂಡ 49-5]

ಈ ಮೇಲಿನ ಮಾತುಗಳಿಗೆಲ್ಲ ಕಿರೀಟವಿಡುವಂತೆ ಒಬ್ಬ ಅನಾಮಿಕ ಕವಿ ನುಡಿಯುತ್ತಾನೆ : 'ಅನಾಯಾಸೇನ ಮರಣಂ ವಿನಾ ದೈನ್ಯೇನ ಜೀವಿತಮ್' ಅನಾಯಾಸವಾದ ಮರಣ ಬರಲಿ : ದೈನ್ಯರೂಪದ 'ಜೀವಿತ' ಬೇಡ. ಎಂಬುದರಲ್ಲಿ ಜೀವನ ಮತ್ತು ಜೀವಿತದ ಭೇದಜ್ಞಾನ ನಮ್ಮಲ್ಲಿ ಉಳಿದಿರುವುದನ್ನು ನಾವು ಕಾಣಬಹುದು.

ಜೀವನವು ಭಾವಾತ್ಮಕ ಸ್ವರೂಪದ್ದು; ಜೀವಿತವು ಅಭಾವಾತ್ಮಕ ಸ್ವರೂಪದ್ದು. ಜೀವನವು ಪ್ರಜ್ಞಾ ಪ್ರಕಾಶಯುಕ್ತವಾದದ್ದು ; ಜೀವಿತವು ಬುದ್ಧಿಯ ನೆರಳಲ್ಲಿ ಇರುವಂಥದ್ದು. ಜೀವನವು ಸಮಾಜ ಸಮಷ್ಟಿ ದಿಕ್ಕಿನ ಕಡೆ ಮುಖ ಚಾಚಿರುವಂಥದ್ದು; ಜೀವಿತವು ವ್ಯಕ್ತಿಯೊಬ್ಬನ ಉಳಿವಿಗೆ ಬೆಳವಿಗೆಗೆ ಗಮನ ಇರುವಂಥದ್ದು; ಜೀವನದಲ್ಲಿ ವಿಶ್ವವ್ಯಾಪಕವಾದ, ವೈಶ್ವಿಕ ಪಾತಳಿಯು ಇದ್ದರೆ, ಜೀವಿತದಲ್ಲಿ ತನ್ನ, ಸುತ್ತಮುತ್ತಣ ಪಾಕಳಿಯದ್ದು ಇರುತ್ತದೆ. ಜೀವನವು ನಿನ್ನೆ–ಇಂದು–ನಾಳೆಯ ಗತಿ ಗಮನ ಇದ್ದರೆ; ಜೀವಿತದಲ್ಲಿ ನಿನ್ನೆ–ಇಂದು ಮಾತ್ರ ಇದ್ದು ನಿತ್ಯ ವರ್ತಮಾನಕಾಲವಾಗಿರುತ್ತದೆ. ಜೀವನದಲ್ಲಿ ಪ್ರಾಮಾಣಿಕತೆ, ಹೃದಯವಂತಿಕೆ ಇದ್ದರೆ ; ಜೀವಿತದಲ್ಲಿ ಮೋಸ, ಸಂಕುಚಿತತೆ ಇರುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಜೀವನ ಮತ್ತು ಜೀವಿತಕ್ಕೆ ಹಗಲು ಮತ್ತು ರಾತ್ರಿಯಷ್ಟು ಭೇದ ಇರುತ್ತದೆ.

ನಮ್ಮ ಇಂದಿನ ಕಾವ್ಯ, ಕಾದಂಬರಿ, ಕಲೆಗಳಲ್ಲಿ ಜೀವನ ಸ್ವರೂಪ ವಿಧಾನದ ಸಾಂಕೇತಿಕ ಆಶಯಗಳು ತುಂಬಾ ಕಡಿಮೆ ಇದ್ದು; 'ಜೀವಿತ' ಸ್ವರೂಪದ ಸಾಂಕೇತಿಕ ಆಶಯಗಳೇ ಪ್ರಬಲಗೊಂಡಿವೆ. ನಾವು ಇಂದು ಬದುಕುತ್ತಿರುವ ವಿಧಾನದಲ್ಲೇ, 'ಜೀವನ' ಮೌಲ್ಯವು ನಷ್ಟವಾಗಿರುವುನ್ನು ಕಾಣಬಹುದು. ನೂರಾರು ಸಹಸ್ರಾರು ಜಾತಿಗಳು, ವೈಯಕ್ತಿಕ ಧರ್ಮಗಳು, ನಾನಾ ಆಚಾರ ಕೂಪಗಳ ಹೊಂಡಗಳಲ್ಲಿ ಹೊರಳಾಡುತ್ತಿರುವ ಇಂದಿನ ನಮ್ಮ ಬದುಕಿನ ರೀತಿ-ನೀತಿಗೆ 'ಜೀವನ ಮತ್ತು ಜೀವಿತ'ದ ತಾರತಮ್ಯವು ಬೇಗ ಅರಿವಿಗೆ ಬಂದಷ್ಟು ಒಳ್ಳೆಯದು.

---

# ಪ್ರಾದುರ್ಭಾವ ಸಮಯದ ಮನು–ಜನು

**ಡಾ|| ಶ. ಬಾ. ಜೋಶಿ**

**ಮಾನವನಾಗಿ ಉಳಿಯದೆ, ವ್ಯಕ್ತಿ :**
**ನರನಾಗಿ ಮಾರ್ಪಟ್ಟಿದ್ದಾನೆ !**

೧

**ಭಗ**ವತ್ ಭಕ್ತನಾಗುವ ಹಂಬಲದಲ್ಲಿ ತನ್ನೊಳಗಿನ ಪ್ರಜ್ಞಾಯುಕ್ತ,ಸ್ವಯಂ-ವೇದ್ಯ ಮನಸ್ ತತ್ತ್ವದ ಮನು : ವೈವಸ್ವತ ಜಾತವೇಡ ಅಗ್ನಿಯನ್ನು (intuition)ತೊರೆದು, ಇವನು'ಆತ್ಮನ್' ಎಂಬ ಅಸ್ವಯಂವೇದ್ಯ ಸ್ವಯಂಭೂ (ಚಾಂದ್ರ) ಮನುವಿನ ದಾಸನಾಗಿದ್ದಾನೆ.

ಈ ವಿಚಾರವು ಒಟ್ಟಿನಲ್ಲಿ ಮಡಿಕೆರೆಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷೀಯ ಭಾಷಣದ ಸಾರವಾಗಿದೆ (೧೯೮೧). ಇದು ಗ್ರಂಥರೂಪದಲ್ಲಿ 'ಬಿತ್ತಿದ್ದನ್ನು ಬೆಳಕೊ' ಹೆಸರಿನಲ್ಲಿ ಪ್ರಕಟವಾಗಿದೆ. ಆದರೂ ಪ್ರಸ್ತುತ ಲೇಖನದಲ್ಲಿ ಮರಳಿ ಆ ವಿಚಾರವನ್ನೇ ಎತ್ತಲು ಕಾರಣವೇನು ?

ಬೆಂಗಳೂರಿನ ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ, **ವೈವಸ್ವತ ಮನುವನ್ನು** ಕುರಿತು ಆಗಿರುವ ದತ್ತಿಯ ಮೊದಲ ಉಪನ್ಯಾಸವು ಇದೀಗ ಪ್ರಕಟವಾಗಿದೆ. ವಿದ್ಯಾಲಂಕಾರ ಪ್ರೊ. ಸಾ. ಕೃ. ರಾಮಚಂದ್ರರಾಯರು ಈ ಉಪನ್ಯಾಸಕರಾಗಿ ಲಭಿಸಿದ್ದರು. ವೈವಸ್ವತ ಮನುವಿನ ಸಮಸ್ಯೆಯಲ್ಲಿ ಒಬ್ಬ ಮನುವಿನ ಪ್ರಶ್ನೆಯ ತೊಡಕು ಇದೆ;ಇನ್ನೊಬ್ಬ ಈ ಮನುವನ್ನು ಸ್ವಾಯಂಭುವ> ಸ್ವಯಂಭೂ ಎಂದು ಕರೆಯಲಾಗುತ್ತದೆ. ವಿದ್ಯಾಲಂಕಾರರು ಈ ತೊಡಕನ್ನು ಬಿಡಿಸಿ ಹೇಳಿರುವ ರೀತಿಯಿಂದ ಈ ಸಮಸ್ಯೆ ಇನ್ನಷ್ಟು ಜಟಿಲವಾದಂತಾಗಿದೆ. ಈ ಕಾರಣದಿಂದಾಗಿ ಆ ಉಪನ್ಯಾಸದ ರೀತಿಯ ಬಗೆಗೆ ಎರಡು ಮಾತು ಹೇಳುವ ಈ ಅನಿವಾರ್ಯತೆಯು ಎದುರಾಗಿದೆ.

ನಾನಾ ನಾಮಾಂತರದ ಮನುಗಳ ಹೆಸರುಗಳನ್ನು ಎತ್ತಿ ಕೊನೆಗೆ "ಗಟ್ಟಿಯಾಗಿ ಉಳಿಯುವ ಮನುಗಳು ಇಬ್ಬರೇ : **ಸ್ವಾಯಂಭುವ** ಮತ್ತು **ವೈವಸ್ವತ**" ಎಂಬ ನಿಷ್ಕರ್ಷಕ್ಕೆ ತಲುಪಿದ್ದಾರೆ (ಪು. ೧೫) ಹೀಗೆ ಟೊಳ್ಳು ಜಳ್ಳು ಮನುಗಳ ಹೆಸರುಗಳನ್ನು ಎತ್ತಿ ಹೇಳಲು ಉಪನ್ಯಾಸದ ೧೫ ಪುಟಗಳು ವೆಚ್ಚವಾಗಿವೆ.

ಗಟ್ಟಿಯಾಗಿ ಉಳಿವ ಇಬ್ಬರು ಮನುಗಳ ಬಗೆಗೇ, ವಿಶೇಷ ಸ್ಪಷ್ಟೀಕರಣವು ಅವಶ್ಯವಿತ್ತು. 'ಆದ್ಯಃ' ಎಂದು ವರ್ಣಿತ ಮನು : ವೈವಸ್ವತನನ್ನು **ಸ್ವಾಯಂಭುವ** ನಿಗಿಂತಲೂ ಅರ್ವಾಚೀನನೆಂಬ ಹಾಗಿನ ಧೋರಣವು ಈ ಉಪನ್ಯಾಸದ ಉದ್ದಕ್ಕೂ ಎದ್ದು ಕಾಣುತ್ತದೆ!'ಮನುಗಳಲ್ಲಿ **ಗಟ್ಟಿಯಾಗಿ ಉಳಿಯುತ್ತಿರುವವರು ಇಬ್ಬರೇ'** ಎಂಬ ನಿರ್ಣಯಕ್ಕೆ ಬಂದಿರುವ ವಂದ್ಯ ಸಾ. ಕೃ. ರಾ. ಅವರು **'ಚತುರ್ದಶ ಮನ್ವಂ**

ತಗ' ದ ತೊಡಕಿನೊಳಗಿಂದ ಸಹಜವಾಗಿ ತಮ್ಮನ್ನು ಬಿಡಿಸಿಕೊಳ್ಳಬಹುದಿತ್ತು ! ಆದರೆ ಸ್ವಾಯಂಭುವನ ಬಗೆಗಿನ ಪಕ್ಷಪಾತದಿಂದಾಗಿ ಅವರು, ಹೀಗೆ ಎಡಹಿದ್ದು ಕಾಣುತ್ತದೆ.

**'ಸ್ವಾಯಂಭುವನು ಬ್ರಹ್ಮನ ಮಗ'** (ಪು. ೮) ವೈವಸ್ವತನು ವಿವಸ್ವತ (ಸೌರ) ತತ್ತ್ವದ ಅಂಶ. ಭಾರತೀಯ ಪೂರ್ವ ಪರಂಪರೆಯಲ್ಲಿ 'ಬ್ರಹ್ಮ ಪ್ರಜಾಪತಿ' ಇವನು ರಾತ್ರ ಸಮಯದ ದೇವರು ! ಸ್ವಾಯಂಭುವ> ಸ್ವಯಂಭುವನು ಚಾಂದ್ರ ನೆಂದು ನಾನು ಹೇಳಿದ್ದು ಉಂಟು. ಈ ಹಿನ್ನಲೆಯಲ್ಲಿ **ಸೌರ = ಪ್ರಕಾಶ ತತ್ತ್ವದ ಮನು ಸಂಪ್ರದಾಯ** ಮತ್ತು ಇದಕ್ಕೆ ಪ್ರತಿಯಾಗಿ **ಬ್ರಹ್ಮ : ಪ್ರಜಾಪತಿ: ಚಾಂದ್ರ ರಾತ್ರ ಸಂಪ್ರದಾಯದ ಮನು** ಸಂಪ್ರದಾಯ ಎಂಬ ಎರಡು ಬಗೆಗಳು ಇರುವುದಾಗಿ ಹೊರಡುತ್ತದೆ.

೨

ಪ್ರೊ.ಸಾ.ಕೃ ರಾಮಚಂದ್ರರಾಯರ ಉಪನ್ಯಾಸವನ್ನು ಇಡಿಯಾಗಿ ವಿಮರ್ಶಿಸುವ ಉದ್ದೇಶವಿಲ್ಲ. 'ಇಬ್ಬರು ಮನುಗಳ ಸಮಸ್ಯೆ' ಭಾರತೀಯ ಸಂಸ್ಕೃತಿಯಜೀವಾಳದ ಪ್ರಶ್ನೆಯಾಗಿದೆ. ಇದು ಜೋಶಿಯ ವೈಯಕ್ತಿಕ ಸ್ವರೂಪದ ಪ್ರಶ್ನೆಯಲ್ಲ. ಇದರ ಕೂಲಂಕಶ ವಿಮರ್ಶೆಯಾಗಬೇಕೆಂದು ನಾನು ಈ ವಿಚಾರವನ್ನು ಸಾರ್ವಜನಿಕರೆದುರು ಇರಿಸಿದ್ದೇನೆ. 'ಆದ್ಯಃ' ಎಂದು ಕಾಲಿದಾಸನು ಹೇಳುವ **'ವೈವಸ್ವತಮನು'** ಮತ್ತು **ಸ್ವಾಯಂಭುವ(ಚಾಂದ್ರ> ಮನು** ಇವರಿಬ್ಬರಲ್ಲಿ ಹೆಚ್ಚು ಪ್ರಾಚೀನನು ಯಾರು? ವೈವಸ್ವತನೇ ? ಸ್ವಾಯಂಭುವನೆ ? ಎಂಬುದು ಸಾಂಸ್ಕೃತಿಕ ಜೀವನ ಮೌಲ್ಯಗಳ ದೃಷ್ಟಿಯಿಂದ ಮೌಲಿಕ ಪ್ರಶ್ನೆಯಾಗಿದೆ. ಆದಕಾರಣ ಈ ವಿಚಾರದ ಇತ್ಯರ್ಥಕ್ಕಾಗಿ ನೆರವಾಗಲು ಸಾರ್ವಜನಿಕ ದೃಷ್ಟಿಕೋನದ ಪ್ರಾಜ್ಞರನ್ನು ಪ್ರಾರ್ಥಿಸುತ್ತಿದ್ದೇನೆ.

'ವೈವಸ್ವತ ಮನು' ವಿನ ಬಗೆಗಿನ ಉಪನ್ಯಾಸದಲ್ಲಿ ಪ್ರೊ. ಸಾ. ಕೃ. ರಾಮಚಂದ್ರ ರಾಯರು "ವ್ಯಾಸಾದಿ ಋಷಿಗಳನ್ನು ಭಗವದ್ಗೀತೆಯಂತಹ ಗ್ರಂಥಗಳನ್ನು, ಡಾ ಜೋಶಿಯವರು ಕಂಡ ಕಣ್ಣಿನಿಂದ ನಾನು ಕಾಣಲಾರೆ" ಎಂದು ಹೇಳಿದ್ದಾರೆ. ಆದರೆ ಮಾನ್ಯ ವ್ಯಾಖ್ಯಾನಕಾರರು 'ನನ್ನ ಕಣ್ಣಿನಿಂದಲೇ ಕಾಣಬೇಕು.' ಎಂಬ ಆಗ್ರಹ ಹಿಡಿವ ಮೂರ್ಖತನವನ್ನು ನಾನು ಮಾಡಲಾರೆ.ವಿದ್ಯಾಲಂಕಾರರಾಗಿರುವ ಶ್ರೀ ರಾಮಚಂದ್ರ ರಾಯರು. 'ಗತಾನುಗತಿಕ' ದೃಷ್ಟಿಕೋನವನ್ನು ತೊರೆದು ಸತ್ಯಾನ್ವೇಷಕ ಸಂಶೋಧಕನ ಚಿಕಿತ್ಸಕ ದೃಷ್ಟಿಯಿಂದ ಈ ಸಮಸ್ಯಾ ಪರಿಹಾರಕ್ಕೆ ಪ್ರಯತ್ನಿಸಲಿ ಎಂದು ನಾನು ಹಾರಯಿಸುತ್ತೇನೆ.

ವ್ಯಾಸ ಹಾಗೂ ಭಗವದ್ಗೀತೆಯ ವಿಚಾರದಲ್ಲಿ ನನ್ನ ಅನ್ವೇಷಣೆಯ ದಾರಿಯು ತಪ್ಪಿದ್ದಲ್ಲಿ,ಅದನ್ನು ಸಪ್ರಮಾಣವಾಗಿ ಖಂಡಿಸುವ ಅಧಿಕಾರವು ಶ್ರೀಯುತರಿಗೆ ಇದೆ. ಆದರೆ ಈ ಗೀತೆಯಲ್ಲಿ ನೇರನಾಗಿ ಚರ್ಚಿಸುವ ಇಚ್ಛೆ ಶ್ರೀಯುತರಿಗೆ ಇರುವಂತೆ ಕಾಣುವುದಿಲ್ಲ.

**ವ್ಯಾಸನನ್ನು** ಪ್ರೊ ಸಾ.ಕೃ. ರಾ. ಅವರು 'ಋಷಿ' ಎಂದಿದ್ದಾರೆ ! ಇದು ಋಷಿ ಸಂಕೇತದ ಅವಜ್ಞೆ. ಪ್ರೊ. ರಾಮಚಂದ್ರರಾಯರ ನಿಷ್ಠೆಯು ಗೀತೆಯ ಭಗವಂತನೇ 'ವ್ಯಾಸನು ಮುನಿ' ಎಂದಿದ್ದಾನೆ : 'ಮುನಿನಾಂ ಅಪಿ ಅಹಂ ವ್ಯಾಸಃ' (೧೦.೩) ! ಗೀತೆಯ ಈ ಉಕ್ತಿಯಂತೆ **ವ್ಯಾಸನು** ಪ್ರವೃತ್ತಿಪರ ಐಹಿಕ ಜೀವನ ರೀತಿಯ'ಋಷಿ' ಸಂಪ್ರದಾಯದವನಲ್ಲ, ಆದಕಾರಣ ಶ್ರೀ ರಾಮಚಂದ್ರರಾಯರು ವ್ಯಾಸನನ್ನು 'ಋಷಿ' ಎಂದು ಬಗೆದಿರುವಲ್ಲಿ ಅವರು ರೂಢಿಶರಣರಾದುದ್ದು ಎದ್ದು ಕಾಣುತ್ತದೆ.

'ಮುನಿಃ ಮೋಕ್ಷಪರಾಯಣಃ' ಎಂದು ಗೀತೆಯೇ ಹೇಳುತ್ತದೆ. ಪ್ರಾಚೀನ ಕಾಲದಲ್ಲಿ ಪ್ರವೃತ್ತಿ ಪರ ಐಹಿಕ ಜೀವನ ರೀತಿಯ ಋಷಿ ಸಂಪ್ರದಾಯವು ಸಮಾಜ ದಲ್ಲಿ ಪ್ರತಿಷ್ಠಿತವಿತ್ತು. ಮೋಕ್ಷಕಾಮಿಗಳಾದ ಮುನಿ:ಯತಿ ಸಂಪ್ರದಾಯವು ತಲೆ ಎತ್ತಿ ಋಷಿ ಸಂಪ್ರದಾಯವನ್ನು ಹಿಮ್ಮೆಟ್ಟಿಸಿರುವುದಾಗಿ ಕಂಡುಬರುತ್ತದೆ. ಪ್ರೊ. ಮ್ಯಾಕ್ ಡೊನೆಲ್ಲಿ ಹಾಗೂ ಡಾ. ಕೀತ್ ಬರೆದಿರುವ 'Vedic Index' ನೋಡಬಹುದು. ಮೂಲದಲ್ಲ ವಿಭಿನ್ನ ಜೀವನ ದೃಷ್ಟಿಯ ಋಷಿ ಮುನಿ:ಯತಿ ಸಂಪ್ರದಾಯಗಳು ಬೇರ ಬೇರೆಬೇರೆಯಿಂದ್ದುದು ಅರಿಕೆಗೆ ಬರುತ್ತದೆ.ಋಷಿ ಹಾಗೂ ಮುನಿ ಸಂಪ್ರದಾಯ ದೊಳಗಿನ ಮೂಲಭೂತ ಭೇದವನ್ನೇ ಲೆಕ್ಕಿಸದ ವಿದ್ಯಾಲಂಕಾರ ಸಂಶೋಧಕರಿಗೆ ವೈವಸ್ವತ ಮನು ಹಾಗೂ ಸ್ವಾಯಂಭುವ ಮನು ಇವರ ನೆಲೆ ನಿಲುಕದಿದ್ದರೆ ಸೋಜಿ ಗವಲ್ಲ.

೩

ಇನ್ನು ಪ್ರಶ್ನೆ : ಈ 'ವ್ಯಾಸ' ಎಂದರೆ ಯಾರು ? ಮಹಾಭಾರತವನ್ನು ರಚಿಸಿ ದವನು, ಅಷ್ಟಾದಶ ಪುರಾಣಾದಿಗಳ ಕರ್ತೃ, 'ವ್ಯಾಸೋಚ್ಛಿಷ್ಟಂ ಜಗತ್ ಸರ್ವಂ' ಎಂಬ ಖ್ಯಾತಿಯ ಈ ಮುನಿಪೋತ್ತಮ.'ವ್ಯಾಸ' ಎಂದರೆ ಯಾರು ? ಇದು ಸಾಂಸ್ಕೃ ತಿಕ ಮಹತ್ವದ ಸಮಸ್ಯೆಯಾಗಿದೆ.

ಗೀತೆಯ ಉಕ್ತಿಯಂತ **ವ್ಯಾಸ** ಮತ್ತು ಗೀತೆಯ **ಭಗವಂತ** ಬೇರೆಯಲ್ಲ. ಈ ಹೇಳಿಕೆಯನ್ನು ಎತ್ತಿ ಹಿಡಿಯುವ ಶ್ಲೋಕವೂ ಉಂಟು;

'ವ್ಯಾಸಾಯ ವಿಷ್ಣು ರೂಪಾಯ, ವ್ಯಾಸರೂಪಾಯ ವಿಷ್ಣವೇ'

ಆದಕಾರಣ, ಗೀತೆಯ ಭಗವಂತ : ಕೃಷ್ಣ ಮತ್ತು ವ್ಯಾಸರಲ್ಲಿ ಅಭೇದವಿರುವು ದಲ್ಲದೆ, ವಿಷ್ಣು =ವ್ಯಾಸರಲ್ಲಿಯೂ ಅನ್ಯೋನ್ಯವಿರುವುದಾಗಿ ಮೇಲಣ ಶ್ಲೋಕ ಭಾಗ ದಿಂದ ಹೊರವಡುತ್ತದೆ. ಇನ್ನು ಪ್ರಶ್ನೆ : ಮೇಲಣ ಶ್ಲೋಕದೊಳಗಿನ ವಿಷ್ಣು ಎಂದರೆ ಯಾರು? ಋಗ್ವೇದದಲ್ಲಿ ವಸಿಷ್ಠನಿಗೆ'ಶಿಪಿವಿಷ್ಟ' ರೂಪದಲ್ಲಿ 'ವಿಷ್ಣುವು' ದರ್ಶನವಿತ್ತಿದ್ದ ಉಲ್ಲೇಖವಿದೆ.(VII ೯೯; ೧೦೦).

ರುದ್ರ : ಶಿವ (ಲಿಂಗನಿಗೂ). 'ಶಿಪಿವಿಷ್ಟ' ನೆಂಬ ಹೆಸರಿದ್ದುದಾಗಿ ರುದ್ರಧ್ಯಾ ಯದ ವರ್ಣನೆಯಿಂದ ತಿಳಿಯುತ್ತದೆ. ಈ ಸುತ್ತು ಮಾತು ಯಾತಕ್ಕೆ, ಋಗ್ವೇದದಲ್ಲಿ

ರುವ 'ಗರ್ಭಾಧಾನ' ಮಂತ್ರದಲ್ಲಿ 'ವಿಷ್ಣುಃ ಯೋನಿಂ ಕಲ್ಪಯತು' ಎಂಬ ನಿರ್ದೇಶನ ವಿದೆ. ಈ ಕಾರಣದಿಂದಾಗಿ 'ವಿಷ್ಣು ರೂಪ ವ್ಯಾಸ' ಎಂದರೆ ಇವನು ಯೋನಿಯನ್ನು ಸಜ್ಜಾಗಿಸುವ ವಿಷ್ಣು= ವ್ಯಾಸನು ಲಿಂಗರೂಪನು, ಎಂಬ ನಿಷ್ಕರ್ಷೆ ಹೊಂದುತ್ತಿರುವು ದನ್ನು ಅಲ್ಲಗಳೆಯಲು ಆದೀತೇ ? ವ್ಯಾಸನ ಸ್ವರೂಪದ ಬಗೆಗಿನ ನನ್ನ ಅನ್ವೇಷ ಣೆಯೇ ತಪ್ಪು ಇದ್ದಲ್ಲಿ ಪ್ರೊ. ಸಾ. ಕೃ. ರಾಯರು ಅದನ್ನು ಎತ್ತಿ ಹೇಳಿ ನನ್ನ ಸತ್ಯಾ ನ್ವೇಷಣೆಗೆ ನೆರವಾಗಬೇಕಾಗಿ ಬೇಡಿಕೊಳ್ಳುತ್ತೇನೆ.

ವಿಷ್ಣು =ವ್ಯಾಸರು ಲಿಂಗರೂಪರು ಆಗುತ್ತಿರುವುದರಿಂದ 'ಮುನೀನಾಂ ಅಹಂ ವ್ಯಾಸಃ, ಎಂಬ ಭಗವಂತನೂ ಲಿಂಗರೂಪನೇ ಆಗುತ್ತಿದ್ದಾನೆ.

**ಭಗ**ವಂತ=ವ್ಯಾಸ = O ಈ ಹಿನ್ನೆಲೆಯಲ್ಲಿ ಈ ವ್ಯಾಸನನ್ನು **ಮುನಿ** = ಮೌನೇಯನು **ಎಂದುದು** ಮಾರ್ಮಿಕವಾಗಿಲ್ಲವೆ ? ಋಗ್ವೇದಸ್ಥ 'ಮುನಿ'ಸೂಕ್ತವೂ ಇದಕ್ಕೆ ಸಾಕ್ಷಿ. (X ೧೩೬)

ಆದಿ ಶಂಕರಾಚಾರ್ಯ ; ಭಗವತ್ ಪಾದರಿಗೆ ಈ 'ನಿತ್ಯ ಮೌನೇಯ ಮುನಿ ಯು ಅವರಿಗೆ ಜ್ಞಾನೋಪದೇಶ ಮಾಡಿದ 'ಗುರುವು' ಆಗಿದ್ದನೆಂದು ಅವರ ಸ್ತೋತ್ರದಿಂದಲೇ ಅರಿಕೆಗೆ ಬರುತ್ತದೆ : "ಗುರೋಃ ತು ಮೌನಂ ವ್ಯಾಖ್ಯಾಂ, ಶಿಷ್ಯಾಃ ತು ಛಿನ್ನ ಸಂಶಯಾಃ ।"

**ಭಗವಾನ್** ಬುದ್ಧನಿಗೆ ಸಾಕ್ಷಾತ್ಕಾರ : ಜ್ಞಾನವು ಲಭಿಸಿದ್ದು ಬೋಧಿ ವೃಕ್ಷ ದಿಂದ ! ನಿತ್ಯ ಮೌನೇಯ ಬೋಧಿ ವೃಕ್ಷ : ಗುರು ; ಲಿಂಗ ಇವು ಪ್ರಾಣ ಲಿಂಗ ಚೇತಸ ಪ್ರತಿಮೆಗಳು. ಹಿರಾಕ್ಲಿಟಸನ 'Logos' ವನ್ನು ಈ ಸಂದರ್ಭದಲ್ಲಿ ಸ್ಮರಿಸಿ ಕೊಳ್ಳಬಹುದು. 'Listening not to me but to Logos' ಎಂದು ಆ ಸಾಕ್ಷಾತ್ಕಾರಿ ಹೇಳುತ್ತಾನೆ. ಪ್ರಾಣಲಿಂಗೋಪಾಸನೆಯ ಫಲವಾಗಿ 'ಅಂತರವಾಣಿ' ಸಿದ್ಧಿಯು ಲಭಿಸುತ್ತದೆ, ಎಂಬ ನಂಬುಗೆಯು, ಎನೆಲ್ಲ ನರ (ಳ) ಸಂಪ್ರದಾಯಗಳಲ್ಲಿ ಉಂಟು ('ಬಿತ್ತಿದ್ದನ್ನು ಬೆಳಕೊ' ವಿವರಣ ನೋಡಿ).

೪

ಇನ್ನೊಂದು ಪವಾಡ ; ಚಮತ್ಕಾರ ಇಲ್ಲಿದೆ : **'ಮುನಿ ವ್ಯಾಸನು ನಾನು'** ಎಂಬ **ಭಗವಂತನು** ಗೀತೆಯನ್ನು **ಬೋಧಿಸಿದ್ದಾನೆ.** 'ಹಯವದನ' ಎಂಬ ಪರ್ಯಾಯ ನಾಮದ ಮೂಲಕ ಈ ಗೀತೆ ಹಯ **ವದನ**ದ ಉಸಿರು ಆಗಿರಬಹುದೆ ? ಆದರೆ 'ವ್ಯಾಸಪ್ರಸಾದಾತ್' ಈ ಗೀತೆಯು ಕೇಳಲು ದೊರೆಯುತ್ತದೆ ಎಂಬ ಉಲ್ಲೇಖವು ಈ ಗೀತೆಯಲ್ಲೇ ಇದೆ. (೧೮-೭೫)

**ಭಾರತೀಯ ಸಂಸ್ಕೃತಿಯನ್ನು ರೂಪಿಸಿದವನೆಂಬ** ಈ **'ಮುನಿ ವ್ಯಾಸ'ನು ಯಾರು** ಎಂಬುದನ್ನು ಅರಿಯುವ ಈ ಪ್ರಯತ್ನವು ತಪ್ಪು ಇದ್ದಲ್ಲಿ, ಇಲ್ಲಿ ಎಡಹುವ ಎಡೆಯನ್ನು ತೋರಿಸಿ ಉಪಕಾರ ಮಾಡಲು ಪ್ರೊ. ಸಾ. ಕೃ. ರಾ. ಅಂತಹ ವಿದ್ವಾಂಸರಲ್ಲಿ ಪ್ರಾರ್ಥಿಸುತ್ತಿದ್ದೇನೆ.

ಭಗವತ್ ಗೀತೆಯ ಬಗೆಗಿನ ಇನ್ನೂ ಒಂದು ಸಮಸ್ಯೆಯ ಪರಿಹಾರವು ಅವಶ್ಯವಾಗುತ್ತಿದೆ. ನರ (ಳ) ನ ರಥದ 'ಸಾರಥಿ' ಎಂಬ ಭಗವಂತನು ಲಿಂಗ ಸ್ವರೂಪನು ! 'ರಥೇನ ಸಹಿತಃ ಸಾರಥಿಃ' ಎಂದು ಹೇಳಲಾಗುತ್ತದೆ. ಆದ ಕಾರಣ, **ನರ (ಳ) ನ** 'ರಥ,' ಮತ್ತು **ಸಾರಥಿ ಭಗವಂತ** ಇವೆರಡರಲ್ಲಿ ಅನ್ಯೋನ್ಯತೆಯುಂಟು !

ನರ ; ನಾರ–ಅಯನ ಇವರಿಬ್ಬರಲ್ಲಿ ಐಕ್ಯವಿರುವುದಾಗಿ ಹೀಗೆ ಹೊರವಡುತ್ತಿದೆ. ಪುರುಷ ; **ಪುರಿ–ಶಯ** = ನಾರ–ಅಯನ ಬೇರೆಯಲ್ಲ. ಈ ಬಗೆಯಾಗಿ ಈ ಗೀತೆಯ ತಳಪಾಯದಲ್ಲಿ ಇರುವ ಭಗವಾನ್ ನಾರಾಯಣ ಸ್ವರೂಪೀ ಪರಬ್ರಹ್ಮನ ಸಾಕ್ಷಾತ್ಕಾರವೂ ಸಾಧ್ಯವಾಗುತ್ತಿದೆ.

೫

ವ್ಯಾಸ : ವಿಷ್ಣು ; ಕೃಷ್ಣ ಇವರು ಸಮಾನ ಆಕೃತಿ ಸ್ವರೂಪರು ಇದ್ದಾರೆ. 'ಆದಿತ್ಯಾನಾಂ ಅಹಂ ವಿಷ್ಣುಃ' ಎಂಬ ಗೀತೋಕ್ತಿಯಿಂದಾಗಿ ಇವೆಲ್ಲ ನಾಮ ರೂಪಗಳು ಆದಿ–ತ್ಯ : ಪುರಿ–**ಶಯ** = ಪುರುಷನ ಪರ್ಯಾಯ ರೂಪಗಳು ಆಗುತ್ತಿವೆ. ಈ ಎಲ್ಲ ವಿವರಣದ ಮೂಲಕ, ಈ ದೇವರುಗಳು 'ಅನಿಮಿಷರು' : ನೆತ್ತಿಗಣ್ಣಿನವರು, ಎಂಬುದನ್ನು ಅರಿಯಬಹುದಾಗಿದೆ. (ಚಿತ್ರಿದ್ದನ್ನು ಬೆಳಕಿೊ)

ವಿದ್ಯಾಲಂಕಾರ ಪ್ರೊ. ರಾಮಚಂದ್ರರಾಯರು, ತಮ್ಮ ವ್ಯಾಖ್ಯಾನದಲ್ಲಿ ಸ್ವಯಂಭೂ> ಸ್ವಾಯಂಭುವ ಸಂಪ್ರದಾಯದ ನಿಷ್ಠೆಯ 'ಕಲ್ಪ' ಸಂಕೇತದಿಂದ ಸೂಚಿತವಿರುವ ಮಹಾನ್ ಕಾಲದ ವರ್ಣನೆಯನ್ನು ಮಾಡಿದ್ದಾರೆ. (ಪು. ೪–೭) ಗೀತೆಯಲ್ಲಿ 'ಮಹತಾಕಾಲೇನ' ಎಂದು ಇರುವ ನಿರ್ದೇಶವು ಶ್ವೇತ ವರಾಹಾದಿ ಕಲ್ಪಗಳನ್ನು ಉದ್ದೇಶಿಸಿಯೇ ಇದೆ. ಎಂದು ಈ ಉಪನ್ಯಾಸಕರು ಅಭಿಪ್ರಾಯ ಪಟ್ಟಿದ್ದಾರೆ (ಪುಟ ೭).

'ಮಹಾ ಸಂಕಲ್ಪದ' ಮೂಲಕ ಸೂಚಿತವಿರುವ ಈ **ಸನಾತನ ಕಾಲದ ಆಕೃತಿ–ಸ್ವರೂಪವು** ಹೀಗೇ ಇರುವ ಕಾರಣವೇನು ಎಂಬುದನ್ನು ಈ ಉಪನ್ಯಾಸಕರು ವಿವರಿಸುವ ಗೋಜಿಗೆ ಹೋಗಿಲ್ಲ. ಕಾರಣವು ಇಲ್ಲದೆ ಕಾರ್ಯವು ಸಂಭವಿಸಲಾರದು. ಈ ದೃಷ್ಟಿಯಿಂದ ಪ್ರಸ್ತುತ '**ಸನಾತನ ಕಾಲದ**' ಹಿನ್ನೆಲೆಯ ನನ್ನ ಈ ಅನ್ವೇಷಣೆಯಲ್ಲಿ ಬೆಳಕಿಗೆ ಬಂದಿರುವುದನ್ನು ಪ್ರಾಜ್ಞರ ಪರಾಮರ್ಶೆಗಾಗಿ ಅರುಹಲಿದ್ದೇನೆ.

ಅ–ನಿಮಿಷ ದೇವರ ಬಗೆಗಿನ ಭಕ್ತಿಯು ಪ್ರಚಲಿತ ಋಗ್ವೇದ ಪಾಠದಷ್ಟು ಪ್ರಾಚೀನವಿರುವುದಾಗಿ ಕಂಡು ಬರುತ್ತಿದೆ. (X ೬೩.೪) ಅ–ನಿಮಿಷ ಸಂಕೇತಕ್ಕೆ ಸಾಯಣರು 'ಸದಾ ಜಾಗರೂಕ' ಎಂದು ಭಾಷ್ಯ ಮಾಡಿದ್ದಾರೆ. ಆದ ಕಾರಣ ಈ 'ಸನಾತನ ಕಾಲ'ದ ಪರಿಕಲ್ಪನೆಯು ವೇದದ 'ಅನಿಮಿಷ ದೇವರ' ಸಂದರ್ಭದಿಂದಲೇ ಮೈದೋರಿರಬೇಕೆಂದು ಬಗೆದರೆ ತಪ್ಪಾಗಲಾರದು,

ಕಠೋಪನಿಷತ್ತಿನಲ್ಲಿ 'ಏಷಃ **ಅಶ್ವತ್ಥಃ ಸನಾತನಃ**' ಎಂಬ ಪ್ರಯೋಗವಿದೆ. (೬. ೧). ಈ 'ಸನಾತನ' ವೃಕ್ಷಕ್ಕೆ 'ಅಕ್ಷಯು' (ವಟ) ಎಂದು ಹೇಳುವ ವಾಡಿಕೆಯೂ ಉಂಟು. 'ಅ–ಕ್ಷಯ' ಕ್ಷಯು ರಹಿತವಾದ್ದದ್ದು 'ಸನಾತನ'. ಇದನ್ನು 'ಅ–ಮೃತಂ ಉಚ್ಯತೇ' ಎಂಬ ಮಾತೂ ಕಠದಲ್ಲಿ ಬಂದಿದೆ. ವೇದದಲ್ಲಿ ಸಾಯಣರು ಈ ಪಿಪ್ಪಲ (ಅಶ್ವತ್ಥ) ವೃಕ್ಷವನ್ನು 'ಆದಿತ್ಯ ವೃಕ್ಷ' ಎಂದು ಸೂಚಿಸಿದ್ದಾರೆ. (I ೧೬೪–೨೧ ರ ಭಾಷ್ಯ) ಈ ಹಿನ್ನೆಲೆಯಲ್ಲಿ '**ಸನಾತನ ಕಾಲ**' ದ ಪರಿಕಲ್ಪನೆಯು ಉಗಮವು 'ಅನಿಮಿಷ' ನೇತ್ರ ಆದಿತ್ಯನೇ ಇರುವುದಾಗಿ ಬಯಲಿಗೆ ಬರುತ್ತಿದೆ! ಮುನಿ ವ್ಯಾಸ : ವಿಷ್ಣು : ಕೃಷ್ಣ ಸಂಪ್ರದಾಯದ ವೈಶಿಷ್ಟ್ಯವೆಂದರೆ ಈ 'ಸನಾತನ ಕಾಲ' ದ ನಂಬುಗೆ.

ಪಾಶ್ಚಾತ್ಯ ಪರಂಪರೆಯುಲ್ಲಿಯೂ ಈ 'ಸನಾತನ' ಕಾಲದ ಕಲ್ಪನೆಯು ಉಂಟು. 'Eternal';'Time is moving eternity' ಎಂಬ ಈ ಸುವಿಖ್ಯಾತ ಉಕ್ತಿಯೇ' ಇದಕ್ಕೆ ಪ್ರಮಾಣ. 'Eternal' 'Eternity' ಈ ಪರಿಕಲ್ಪನೆಯು 'Immortal 'Immorality' ಗಳಿಗೂ ಕಾರಣವಿರಬೇಕೆಂದೂ ಸ್ಪಷ್ಟವಿದೆ. ಸೋಜಿಗದ ಸಂಗತಿಯೆಂದರೆ 'Eternity' ಪದಕ್ಕೆ 'The life after death' ಎಂಬ ಅರ್ಥವೂ ಉಂಟು ! (The Advanced Learners Dictionary of current English 13th edition, 1961, P. 411)

ಇದ ಕಾರಣ ಈ 'ಸನಾತನ ಕಾಲ : 'Eternal, Eternity' ಇದು ಕತ್ತಲಿನ ಕಾಲ : ಕೃಷ್ಣ ಕಾಲವಾಗುತ್ತಿದೆ. 'ಸನಾತನ' ಪುರುಷನೆಂದೂ ಕರೆಯಲಾಗುವ ಗೀತೆಯ ಭಗವಂತ : 'ಆದಿತ್ಯನಿಗೆ' 'ಕೃಷ್ಣ (ಕರಿಯ)' ಎಂದು ಇರುವ ಮಾರ್ಮಿಕ ಅರ್ಥವು ಔಚಿತ್ಯಯುಕ್ತವೂ ಆಗಿದೆ.

ಈ ಸನಾತನ : ಕೃಷ್ಣ ಕಾಲವು. ಮೃತ್ಯು ತತ್ತ್ವದ ಛಾಯೆ ಎಂಬ ಸಂಗತಿಯು, ಭಗವದ್ಗಿತೆಯ ಭಗವಂತನ ಹೇಳಿಕೆಯಿಂದಲೇ ಬೆಳಕಿಗೆ ಬರುತ್ತದೆ : 'ಕಾಲಃ ಅಸ್ಮಿ ಲೋಕ ಕ್ಷಯ ಕೃತ್ ಪ್ರವೃದ್ಧಃ ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ (೧೫.೩೨)

(ಲೋಕ ಕ್ಷಯಕ್ಕಾಗಿ ನಿಗುರಿ ನಿಂತಿರುವ : ಪ್ರವೃದ್ಧ ಕಾಲನು ನಾನು ಲೋಕ ನಾಶಕ್ಕಾಗಿಯೇ ಇಲ್ಲಿ ಅವತರಿಸಿದ್ದೇನೆ).

ಈ ಸನಾತನ ವೃಕ್ಷ ( : ಲಿಂಗ) ಕಾಲವನ್ನು : ಪುರಿ–**ಶಯ** : ಪುರುಷನನ್ನು 'ಏಷಃ ಅ–ಕಲಃ ಅ–ಮೃತಃ ಭವತಿ' (ಅ–ಕಲ ಕಾಲಃ : ಅ–ಕಾಲ) ರೂಪನು ಎಂದು ವರ್ಣಿಸಿದೆ, ಪ್ರಶೋಪನಿಷತ್ತು ! (೬–೫) 'ಅ–ಕಾಲಃ' (ವಿಶ್ವರೂಪ) ಎಂದು ಶ್ವೇತಾಶ್ವತರವು ಹೇಳುತ್ತದೆ. (೬–೫).

"ಸಃ ವೃಕ್ಷ ಕಾಲಾಕೃತಿ...ಭಗೇಶ..." ಎಂದೂ ಈ ಉಪನಿಷತ್ತು ಹೇಳುತ್ತಿದೆ (೬–೬) ಈ ಹಿನ್ನೆಲೆಯಲ್ಲಿ ಶ್ರೀ ಗುರು ನಾನಕನಿಗೆ 'ಕಾಲಾಕೃತಿ ವೃಕ್ಷ'ದ : ಅ–ಕಲಃ ಅಕಾಲದ ಸಾಕ್ಷಾತ್ಕಾರವಾಗಿರಲಿಕ್ಕೆಬೇಕು, ಎಂಬ ಮೌಲಿಕ ಅಂಶವು ಇಲ್ಲಿ ಬೆಳಕಿನಲ್ಲಿ ಬರುತ್ತದೆ

೩

**ಇದೆಲ್ಲ ಸ್ಪಷ್ಟೀಕರಣವು, ಅವಶ್ಯವಾದದ್ದು, ಸ್ವಾಯಂಭುವ> ಸ್ವಯಂಭೂ : ಚಾಂದ್ರ ಮನುವಿನ ಮೂಲಕ !**

'ಸ್ವಯಂಭೂ' ಎಂದರೆ ಚಂದ್ರನೆ! ಅಮಾವಾಸ್ಯೆಗೆ ಪ್ರ -ಲಯವಾಗಿ,ಈ ಇಲ್ಲವೆ ದೊಳಗಿನಿಂದಲೇ ಮರಳಿ ಚಿಗಿತುಕೊಳ್ಳುತ್ತಾನೆ.

ಈ ಇಲ್ಲವೇಯ (O) ಒಳಗಿಂದಲೇ ಮರಳಿ ಹುಟ್ಟುವ ಈ ಚಂದ್ರ ಸ್ವರೂಪೀ ಮೃತ್ಯುತತ್ತ್ವವು ಅಮೃತ ಸ್ವರೂಪದ್ದು ಆಗಿದೆ !

ಋಗ್ವೇದದಲ್ಲಿ ವರ್ಣಿತ **ತನೂ-ನಪಾತ್** (Son of himself) ಚಂದ್ರ ಮನೇ ಸರಿ. ಇವನನ್ನು "ಅಪಾಂ ನಪ್ತ್ರ (ನೀರಿನ ಕುವರ) ಎಂದು ಹೆಸರಿಸಲಾಗಿದೆ.

ಆದರೆ ಈ ಮೃತ್ಯುತತ್ತ್ವದ ಚಾಂದ್ರ ದೇವರುಗಳೆಲ್ಲವೂ ಕಣ್ಕಟ್ಟು : ಭೌತ ಬಾಹ್ಯ ದೃಶ್ಯ (Phenomenon) ಸ್ವರೂಪದ್ದು ಆಗಿವೆ.

ವಿದ್ಯಾಲಂಕಾರ ಪ್ರೊ. ಸಾ. ಕೃ. ರಾಮಚಂದ್ರರಾಯರು ಮಾತಿನ ಚಾಕಚಕ್ಯತೆ ದಿಂದಾಗಿ ಈ 'ಅನೃತ' (ಹುಸಿ) ದೇವರುಗಳನ್ನು ಋತಃ ಸತ್ಯದ ಪಾತಳಿಯ ದೇವರೆಂಬ ಸಂಭ್ರಮ ನಿರ್ಮಿಸಬಹುದಾದರೂ ಪುರಾತನರು ಹೇಳಿರುವಂತೆ 'ಸತ್ಯಂ ಏವ ಜಯತಿ ನ ಅನೃತಮ್' ಪ್ರಕಾಶ ರೂಪ ವಿಶ್ವ ನಿಯಮದ ಆಧಾರದ ಸತ್ಯಕ್ಕೇ ಗೆಲವು, ಹೊರತು ಕತ್ತಲಿನ, ಮಾತಿನ ಚಾಕಚಕ್ಯಕ್ಕೆ ಅನೃತಕ್ಕೆ ಗೆಲವು ಇಲ್ಲ.

ತಮ್ಮ ಪಕ್ಷವನ್ನುಗೆದಿಸಿಕೊಳ್ಳಲು ವ್ಯಾಸ / ಪೈಥಾಗೊರಾಸ್ ಪಂಥೀಯರು ಈ ಮಾನವ ಜೀವನ ವಿಶ್ವದ ಆಕೃತಿಯನ್ನೆ ಮೊಟಕುಗೊಳಿಸುವುದಕ್ಕೂ ಹೇಸಿಲ್ಲ.

ಈ ಜೀವನ ವಿಶ್ವದಲ್ಲಿ 'Organic' ಮತ್ತು 'Super organic' ಎಂಬ ಎರಡು ಪಾತಳಿಗಳು ಇರುವುದಾಗಿ ಮಾನವ ಶಾಸ್ತ್ರಜ್ಞ ಡಾ. ಕ್ರೋಬರ ಹೇಳುತ್ತಾನೆ. ಕ್ರೋಬರ ಹೇಳುವ 'Organic' ಪಾತಳಿಯನ್ನು 'Biosphere' ಎಂದು ಡಾ ಜ್ಯೂಲಿಯರ್ ಹಕಸ್ಲೇ ಹೇಳುತ್ತಾನೆ. ಇದು ಪ್ರಾಣ-ಚೇತಸದ ಪಾತಳಿ; ಇದನ್ನು ಭಾರತಿಯ ಪುರಾತನರು, ಭೂಃ-ಭುವಃ ಎಂಬ ಜೋಡು ಸಂಕೇತಗಳಿಂದ ಸೂಚಿಸಿ ದ್ದಾರೆ. ಭೂಃ (ಅಯಂ ಲೋಕಃ) **ಭುವಃ** (ಅಂತರಿಕ್ಷಂ) : ನೆಲ ಮುಗಿಲುಗಳ ನಡು ವಣ ಈ ಟೊಳ್ಳು (O) ಇದನ್ನು ಸ್ಥ **ಲ : ಸ್ಥಲದ ಗತಿರೂಪ ಕಾಲ** ಎಂದೂ ವಿಂಗಡಿಸಿ ಹೇಳಲಾಗುತ್ತದೆ. ಇದು ಭೌತ ದೃಶ್ಯಗಳ ಲೋಕ (Phenomena).

ನಿತ್ಯ ಅಂತರ್ನಿಸಂಗತಿ ಪ್ರೇರಣಾದ್ವಂದ್ವಾತ್ಮಕ (O) ಸ್ವರೂಪದ ಅಸ್ತಿತ್ವವು ಈ ಪಾತಳಿಯ ಮೇಲಣದು.ಇದನ್ನು 'Law of contraries' ಎಂದು ಹಿರಾ ಕ್ಲಿಟಸ್ ಹೇಳುತ್ತಾನೆ! ಆದರೆ Law =ನಿಯಮ, **ಅನಿಯತನೆ ನಿಯಮ** : ಅಪ ವಾದವೇ ನಿಯಮ ಎಂದಂತೆ ! ಇದಕ್ಕಿಂತಲೂ ಇಲ್ಲಿ. ನಿಯಮ ವ್ಯವಸ್ಥೆ ನೈತಿಕ ಮೂಲ್ಯಗಳ ಅಭಾವವೆ ಇರುತ್ತದೆ ಎಂದರೆ ಹೆಚ್ಚು ಪ್ರಾಮಾಣಿಕ ಅಭಿವ್ಯಕ್ತಿ ಎನಿಸೀತು.

ಹಾಗಾದರೆ ಈ ಜೀವನದಲ್ಲಿ ಅರ್ಥ : ವಿಚಾರ : ಮೌಲ್ಯಗಳೂ ಉಂಟು, ಈ ಪಾತಳಿಯನ್ನೆ ಪುರಾತನರು ಆಕಾಶತತ್ತ್ವದ ಪ್ರಕಾಶರೂಪ ಸ್ವರ್ ಪಾತಳಿ ಎಂದು ಹೆಸರಿಸಿದ್ದಾರೆ. ಇದನ್ನು ಆಧುನಿಕ ಪರಿಭಾಷೆಯಲ್ಲಿ, **ಆದರ್ಶ** (Objective) **ವಾಸ್ತವ : ಸತ್ಯದ** (Reality) **ಪಾತಳಿ** ಎಂದು ಎನ್ನಬಹುದಾಗಿದೆ. ಮನು : ವೈವಸ್ವತ : ಜಾತವೇದ ಅಗ್ನಿ ಈ ತತ್ತ್ವದ ಪಾತಳಿಯು ಇದು. ಇಂದ್ರಿಯಗಳ-ಸ್ಥಲ-ಕಾಲದ ಪಾತಳಿಯ ಆಚೆಗೆ ಇದೆ! ಕಾಂಟನ 'Transcendental' ಪರಿಭಾಷೆಯ ಪಾತಳಿಯು ಇದು. ಅಥವಾ ಇವನೇ ಹೇಳಿರುವ 'Noumena'ದ,ಅರಿಸ್ಟಾಟ್ಲನ Nous : mind ಇರುವ ಪಾತಳಿಯು ಇದು.

ಆ-ದರ್ಶ ವಾಸ್ತವ : ಸತ್ಯವನ್ನು ಕಾಣುತ್ತಿದ್ದ ಮನುಜನನ್ನು, ವ್ಯಾಸ ಪೈಥ್ಯಾಗೊರಾಸ ಪಂಥೀಯರ ಇಂದ್ರಿಯಗಳ= ಸ್ಥಲ ಕಾಲ (o) (1) ದ =ವೃತ್ತಾಕೃತಿಯ ಕಾಲಗತಿಯ (ಸಂ)ಭವ ಚಕ್ರದಲ್ಲಿ ಸಿಕ್ಕಿ ಬೀಳುವ ಮಾಟ : Black-magic ಮಾಡಿದ್ದಾರೆ. ಈ ಮಾಟದ ಬಗೆಗಳನ್ನು ನನ್ನ ಈ ಮೊದಲಿನ ಪ್ರಕಟನೆಗಳಲ್ಲಿ ವಿವರಿಸಿದ್ದೇನೆ. ಇಲ್ಲಿ ಮಾದರಿಗಾಗಿ ಒಂದು ಕಣ್ಕಟ್ಟನ್ನು ಹೇಳ ಬಯಸುತ್ತೇನೆ

ಆ-ದರ್ಶ ವಾಸ್ತವ : ಸತ್ಯವು (Objective reality) ಕಾಣಬಲ್ಲ ಆ-ಕಾಶ ತತ್ತ್ವದ ಸ್ವರ್ ಪಾತಳಿಯನ್ನು ಭೂಃ – ಭುವಃ ಈ (o) ಟೊಳ್ಳಿನಲ್ಲಿ ತಂದಿರಿಸಲಾಗಿದೆ. ಉದಾ : '**ಚಂದ್ರಮಾ ಮನಃ ಭೂತ್ವಾ ಹೃದಯಂ ಪ್ರಾವಿಶತ್** (ಐ. ೧.೨.೪.) ಚಾಂದ್ರ ಮನಸ್ ತತ್ತ್ವವು **ಹೃದಯ**ವನ್ನು ಪ್ರವೇಶಿಸಿದೆ.' 'ವೈವಸ್ವತ ಮನು' ಮನಸ್ ತತ್ತ್ವವು ಸ್ವರ್ ಪಾತಳಿಯ ಮೇಲಿದೆ. ಆದರೆ ಆ ಸ್ವರ್ ಪಾತಳಿಯನ್ನು ಕಣ್ಮರೆಯಾಗಿಸಿ, 'ಸ್ವರ್' ಇದು ಯೋನಿ ಮಂಡಳದಲ್ಲಿ ಉಂಟು ಎಂದು ನಂಬಿಸಲಾಗಿದೆ.

ಚಾಂದ್ರ ಮನಸ್ಸು ಸೇರಿಕೊಂಡ 'ಹೃದಯ' ಎಂದರೆ ಯಾವುದು ? ಇದರ ಹಲವಾರು ಪ್ರಯೋಗ ಹೇಳಿ ಬೇಸರಿಸುವ ಇಚ್ಛೆ ನನಗಿಲ್ಲ. ಈಗ ಒಂದೇ ಉದಾಹರಣವು ಸಾಕು.

ಪ್ರಶ್ನೋತ್ತರ ರೂಪ ಈ ಅವತರಣಿಕೆಯು ಮನನೀಯವಿದೆ.

೧) ಪ್ರಶ್ನೆ : ಕಸ್ಮಿನ್‌ನು ಆಪಃ ಪ್ರತಿಷ್ಠಿತಾ ಇತಿ, ಉತ್ತರ. ರೇತಸಿ ಇತಿ.

೨) ಪ್ರಶ್ನೆ : ಕಸ್ಮಿನ್‌ನು ರೇತಃ ಪ್ರತಿಷ್ಠಿತಂ ಇತಿ ಉತ್ತರ. ಹೃದಯಂ ಇತಿ.

ರೇತಸು ಇರುವ ಈ ಹೃದಯವನ್ನು 'ಗುಹೆ' ಎಂದು ಹೇಳಲಾಗುತ್ತಿರುವುದರಿಂದ 'ಸ್ತ್ರೀಯರು ಮಾತ್ರ ಹೃದಯ ಉಳ್ಳವರು, ಗಂಡಿಗೆ ಹೃದಯವಿಲ್ಲ' ನರ(ಳ)ರ ಮನಸ್ಸು **ಹೃದಯ**ದತ್ತ ಆಕರ್ಷಿಸಲ್ಪಡುವುದು ಸ್ವಾಭಾವಿಕವೇ ಆಗಿದೆ.

ಪೈಥ್ಯಾಗೊರಾಸನಿಗೆ ಈ ಪಂಥೀಯರಿಗೆ ಜೀವನ ವಿಶ್ವಸ್ಥ ಮೂರು ಪಾತಳಿಗಳು ಮಾನ್ಯವಿದ್ದದನ್ನು ಈ ಮೊದಲು ೨ ಬಾರಿ ಎತ್ತಿ ಹೇಳಿದ್ದೇನೆ. ಆದರೆ ಈ ಪೈಥ್ಯಾಗೊರಾಸನು 'triad' ಕ್ಕೆ ಬದಲಾಗಿ Dyad = mirocosm

macrocosm= ಪಿಂಡ-ಬ್ರಹ್ಮಾಂಡ ಈ ಎರಡೇ ಪಾತಳಿಗಳನ್ನು ತನ್ನ ಸಂಪ್ರದಾಯದ ಆಚಾರಾಂಗದಲ್ಲಿ ರೂಢಿಸಿದ್ದಾನೆ.ಪುರಾತನ ಪರಿಭಾಷೆಯ 'universe' ಸಂಕೇತವನ್ನು ಕಡೆಗಣಿಸಿ 'cosmos'ಎಂಬ ಹೊಸ ಪರಿಭಾಷೆಯನ್ನು ರೂಢಿಸಿದ್ದಾನೆ! ಇದರಿಂದಾಗಿ 'objective reality' ದರ್ಶನ ಮಾಡಿಸಬಲ್ಲ ಮೂರನೆಯ ಸ್ವರ್ ಪಾತಳಿ ಇದನ್ನೇ (Triad) ಪೈಥ್ಯಾಗೊರಾಸನು ಲೆಕ್ಕಿಸಲಿಲ್ಲ.

ಪೈಥ್ಯಾಗೊರಾಸನಿಂದ ಪ್ರಭಾವಿತನಾದ ತರುಣ ಹಿರಾಕ್ಲಿಟಸ್‌ನು ಗುರುಸ್ಥಾನೀಯ ವೃದ್ಧ ಪೈಥ್ಯಾಗೊರಾಸನನ್ನು ಯಾವ ಕಾರಣವನ್ನು ಹೇಳದೆಯೇ 'Prince of cheats' ಎಂದು ಟೀಕಿಸಿದ್ದು ಗ್ರೀಕ್ ತತ್ತ್ವ ಜ್ಞಾನದ ಇತಿಹಾಸದಲ್ಲಿ ನಮೂದು ಇದೆ.

ವಿದ್ಯಾಲಂಕಾರ ಪ್ರೊ ಸಾ.ಕೃ. ರಾಮಚಂದ್ರರಾಯರು ಮನು ವೈವಸ್ವತನನ್ನು ಸಂದೇಹಿಸುವ ಹಾಗಿನ ಶೈಲಿಯಲ್ಲಿ ಮಾಡಿರುವ ಅವರ ಉಪನ್ಯಾಸದ ನೆಪದಿಂದ ಈ ನಾಲ್ಕು ಮಾತುಗಳನ್ನು ಬರೆಯುವುದು ಕರ್ತವ್ಯವಾಯ್ತು.

ವ್ಯಾಸ/ಪೈಥ್ಯಾಗೊರಾಸ ಪಂಥೀಯರ ಪ್ರಭಾವದಲ್ಲಿ ಜಾಗತಿಕ ಹಂತದಲ್ಲಿಯೇ ಮಾನವನು, ಅ-ಮಾನವ : ವ್ಯಕ್ತಿ : ನರ (೪) : ನಾಗಿ ಮಾರ್ಪಟ್ಟಿರುವುದಾಗಿ ಸಪ್ರಮಾಣವಾಗಿ ಬೆಳಕಿಗೆ ಬರುತ್ತಿದೆ. ಸೌರ ಮನಸ್ಸಿನ ಪ್ರಭಾವದಲ್ಲಿ ಇರಬೇಕಾದ ಮನುಜನು ಇಂದು ಚಾಂದ್ರ (ಲೈಂಗಿಕ) ಪಾತಳಿಯ ಮನಸ್ಸಿನ ಕೈಗೊಂಬೆ ಆಗಿರುವುದು ಕಂಡುಬರುತ್ತದೆ.

'ನಾಭಿಮೂಲದಿಂದ ಹೊರಬರುವ ಶ್ವೇತದ್ರವ್ಯ'ವು ಭಾಷೆ- ಸಂಸ್ಕೃತಿಗೆ ಕಾರಣವಾಗಿದೆ ಎಂದು ನಂಬುತ್ತಿರುವ ಕುನಾಡವರು. 'ಕುರಿತು ಓದದೆಯುಂ ಪರಿಣತಮತಿಗಳಾಗಿದ್ದ''ಬಗೆ'ಗಣ್ಣಿನ-ಪ್ರಜ್ಞಾನೇತ್ರದ ಆ ಹಂತಕ್ಕೆ ಇಂದು ವಂಚಿತರಾಗಿದ್ದೇವೆ ಎಂಬುದನ್ನು ಸ್ಮರಿಸಿಕೊಳ್ಳಲು ಪ್ರಾರ್ಥನೆ.

---



# ಜಾಹೀರಾತುಗಳ ಪರಿವಿಡಿ

# ದಿ ಬೆಳಗಾಂವ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ ನಿ., ರಾಷ್ಟ್ರೀಯ ಹೆದ್ದಾರಿ ನಂ. ೪, ಬೆಳಗಾಂವ

ಪ್ರಧಾನ ಕಛೇರಿ : ಬೆಳಗಾಂವ. ಶಾಖೆಗಳು : ೮೮

ಸ್ಥಾಪನೆ : ೧೦-೨-೧೯೧೯,

ತಂತಿ : "ಡಿಸೆಂಟ್ ಬ್ಯಾಂಕ"

ದೂರವಾಣಿ :
ಅಧ್ಯಕ್ಷರು : ೨೨೩೮೧
ಪಿ.ಬಿ.ಎಕ್ಸ್ (೪) : ೨೩೪೬೬

ದಿನಾಂಕ ೩೦-೬-೧೯೮೪ ಕ್ಕೆ ಇದ್ದಂತೆ
ಬ್ಯಾಂಕಿನ ಸಾಂಪತ್ತಿಕ ಸ್ಥಿತಿಯ ಪಕ್ಷಿನೋಟ.

| | (ರೂ. ಲಕ್ಷಗಳಲ್ಲಿ) |
|---|---|
| ಶೇರ ಬಂಡವಾಳ | ೩೫೪.೪೦ |
| ಕಾಯ್ದಿಟ್ಟ ನಿಧಿ ಮತ್ತು ಇತರ ನಿಧಿ | ೧೯೬.೯೯ |
| ಠೇವುಗಳು | ೩೭೦೫.೧೨ |
| ಸಾಲಗಳು | ೫೨೧೭.೧೭ |
| ದುಡಿಯುವ ಭಂಡವಾಳ | ೬೪೯೩.೧೩ |
| ೧೯೮೩-೮೪ ರ ಲಾಭ | ೨೫.೨೮ |

ರಾಷ್ಟ್ರೀಕೃತ ಮತ್ತು ವಾಣಿಜ್ಯ ಬ್ಯಾಂಕುಗಳಿಗಿಂತ ಎಲ್ಲ ಬಗೆಯ ಠೇವುಗಳ ಮೇಲೆ ಪ್ರತಿಶತ ಅರ್ಧ ಟಕ್ಕೆ ಅಧಿಕ ಬಡ್ಡಿಯನ್ನು ಕೊಡಲಾಗುತ್ತಿದೆ.

ಬ್ಯಾಂಕಿನಲ್ಲಿ ತೊಡಗಿಸಿದ ಠೇವುಗಳಿಗೆ ಡಿಪಾಜಿಟ ಇನ್ಸುರನ್ಸ ಕಾರ್ಪೊರೇಶನ್ನಿನ ಇನ್ಸೂರನ್ಸ್ ಸೌಲಭ್ಯವು ಅನ್ವಯವಾಗುತ್ತಿದೆ ಮತ್ತು ನಿಮ್ಮ ಠೇವುಗಳಿಗೆ ಭದ್ರತೆ ಇದೆ. ಬ್ಯಾಂಕಿನ ಪ್ರಧಾನ ಕಛೇರಿಯಲ್ಲಿ ಬರಖಾರ ಶಾಖೆ, ಬೆಳಗಾಂವ, ಬೈಲಹೊಂಗಲ ಮತ್ತು ಸವದತ್ತಿ ಶಾಖೆಗಳಲ್ಲಿ ನಿಮ್ಮ ಮೌಲ್ಯ ವಸ್ತುಗಳ ಭದ್ರತೆಯ ಸಲುವಾಗಿ ಲಾಕರುಗಳ ವ್ಯವಸ್ಥೆ ಇರುತ್ತದೆ.

ಬ್ಯಾಂಕಿಂಗ 'ರಿಕರಿಂಗ' ಠೇವು ಖಾತೆ ಯೋಜನೆ ಹಾಗೂ 'ಭಾಗ್ಯಜ್ಯೋತಿ' ಠೇವು ಯೋಜನೆಯಲ್ಲಿ ನಿಮ್ಮ ಉಳಿತಾಯದ ಹಣವನ್ನು ತೊಡಗಿಸಿ ಅಧಿಕ ಲಾಭ ಪಡೆಯಿರಿ. ರಿಕರಿಂಗ ಠೇವುಗಳನ್ನು ರೂ. ೧೦ರ ಗುಣಕಗಳಲ್ಲಿಯೂ, ಭಾಗ್ಯಜ್ಯೋತಿ ಠೇವುಗಳನ್ನು ರೂ. ೧೦೦ ರ ಗುಣಕಗಳಲ್ಲಿಯೂ ತೊಡಗಿಸಬಹುದು.

ನಿಮ್ಮ ಎಲ್ಲ ಬ್ಯಾಂಕಿಂಗ ಸೌಲಭ್ಯಗಳಿಗೆ ಇಂದೇ ಸಮೀಪದ ನಮ್ಮ ಬ್ಯಾಂಕಿನ ಶಾಖೆಗೆ ಭೆಟ್ಟಿಕೊಟ್ಟು ವಿಚಾರಿಸಿರಿ; ಅಥವಾ ಸಂಪರ್ಕ ಬೆಳೆಸಿರಿ.

ದಿಗ್ದರ್ಶಕ ಮಂಡಳದ ಪರವಾಗಿ,

ಪಿ.ಸಿ. ಖಾನಾಪುರಿ,
ಜನರಲ್ ಮ್ಯಾನೇಜರ.

ಗು.ಮು. ನಿಡಗುಂದಿ
ಪ್ರೆಸಿಡೆಂಟ್.

## ಒಕ್ಕಲುತನದ ಹುಟ್ಟುವಳಿ ಪೇಟೆಯು ಸಮಿತಿ,ಕುಡಚಿ

ತಾಲೂಕ-ರಾಯಬಾಗ] [ಜಿಲ್ಲೆ : ಬೆಳಗಾವಿ

ರೈತ ಭಾಂಧವರು ತಾವು ಬೆಳೆದ ಕೃಷಿ ಉತ್ಪನ್ನ ಹುಟ್ಟುವಳಿಗಳಿಗೆ ಯೋಗ್ಯ ಬೆಲೆ ದೊರೆಯಬೇಕಾದರೆ ತಾವು ಬೆಳೆದ ಕೃಷಿ ಹುಟ್ಟುವಳಿಗಳನ್ನು ನಿಯಂತ್ರಿತ ಮಾರುಕಟ್ಟೆಯು ನಿಗದಿ ಪಡಿಸಿದ ಸ್ಥಳಗಳಲ್ಲಿ ಮಾರಾಟ ಮಾಡಬೇಕು ಹಾಗೂ ಮಾರುಕಟ್ಟೆಯ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳಬೇಕೆಂದು ವಿನಂತಿಸಿಕೊಳ್ಳಲಾಗಿದೆ.

**ಸ್ಥಾಪನೆ ೧೯೬೧**

ಸಮಿತಿ ಕಾರ್ಯಕ್ಷೇತ್ರ : ಕುಡಚಿ (ರಾಯಬಾಗ ತಾಲೂಕ)
ಮುಖ್ಯ ಮಾರುಕಟ್ಟೆ : ಕುಡಚಿ
ಮಾರುಕಟ್ಟೆ ಪ್ರಾಂಗಣವಿಸ್ತೀರ್ಣ: ೬ ಎಕರೆ ೧೬ ಗುಂಟೆ
ಉಪ ಮಾರುಕಟ್ಟೆಗಳು : ಹಾರೂಗೇರಿ, ರಾಯಬಾಗ

**ಸಮಿತಿ ಸದಸ್ಯರು**

ಶ್ರೀ ಎ. ಎಮ್. ಅಸ್ಕಿ (ಅಧ್ಯಕ್ಷರು)
,, ಪಿ. ಎಮ್. ಪಾಟೀಲ (ಉಪಾಧ್ಯಕ್ಷರು)
,, ಎಸ್. ಡಿ. ಪಾಟೀಲ (ಸದಸ್ಯರು)
,, ಎಸ್. ಜಿ. ದೇಸಾಯಿ ,,
,, ಎಸ್. ಪಿ. ಡಡ್ಡಿ ,,
,, ಡಿ. ಬಿ. ಪಾಟೀಲ ,,
,, ಎಸ್. ಎಸ್. ಕುಡಚಿ ,,
,, ಆಯ್. ಎಸ್. ಚಮನ ಶೇಖ ,,
,, ಪಿ. ಬಿ. ಪಾಟೀಲ ,,
,, ಎ. ಎ. ಸಮಗಾರ ,,
,, ಎಮ್. ಎಸ್. ಗೋಕಾಕ ,,
,, ಎಸ್. ಬಿ. ಬೆಡಕಿಹಾಳೆ ,,
,, ಕೃಷ್ಣಾ ಮಾಂಗ ,,
,, ಎ. ಕೆ. ಸಾವಳಗಿ ,,
ಮಾರ್ಕೆಟಿಂಗ ಇನ್‌ಸ್ಪೆಕ್ಟರ, ಬೆಳಗಾವಿ.

ಯು. ಎಮ್. ಮುಕ್ತಿನಾಥ — ಕಾರ್ಯದರ್ಶಿ

ಎ. ಎಮ್. ಅಸ್ಕಿ — ಅಧ್ಯಕ್ಷರು

# ನೀವು ಸಹಕಾರಿ ರಂಗದಲ್ಲಿ ಆದರ್ಶವಾದ ಸಕ್ಕರೆ ಕಾರಖಾನೆ ಎಲ್ಲಿ ಇದೆಯೆಂದು ಕೇಳಿದ್ದಿರಾ ?



೧. ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಕ್ರಾಂತಿಮಾಡಿ ರೈತರ ಜೀವನ ಮಟ್ಟ ಎತ್ತರಿಸಿದೆ.

೨. ಈ ಸಕ್ಕರೆ ಕಾರಖಾನೆ ಯಂತ್ರೋಪಕರಣಗಳು ಅತ್ಯಂತ ನವೀನವಾಗಿದ್ದು ಭಾರತದಲ್ಲಿಯೇ, ಭಾರತೀಯ ಕುಶಲ-ಕರ್ಮಿಗಳಿಂದ ತಯಾರಿಸಿದ್ದು ಒಳ್ಳೇ ದಕ್ಷತೆಯಿಂದ ಕೆಲಸ ಮಾಡುತ್ತಿದೆ.

೩. ಪ್ರಗತಿಪರ ವ್ಯವಸ್ಥಾಪಕತ್ವ ಮತ್ತು ಆದರ್ಶ ಆಡಳಿತವನ್ನೊಳಗೊಂಡಿದೆ.

೪. ಐದು ನಮೂನೆಯ ಸುಂದರ ಅತ್ಯುತ್ತಮ ಬೆಳ್ಳಗಿನ ಹರಳು ಸಕ್ಕರೆಯನ್ನು ತಯಾರಿಸಲಾಗುತ್ತಿದೆ.

೫. ಉತ್ಪಾದಕ ಸದಸ್ಯರೆನ್ನು ಅತ್ಯುತ್ತಮ ರೀತಿಯಿಂದ ನಡೆಯಿಸಿಕೊಳ್ಳುತ್ತಿದ್ದು, ಅವರು ತಮ್ಮ ಕಬ್ಬಿಗೆ ಅತಿ ಹೆಚ್ಚಿನ ಬೆಲೆ ಪಡೆಯುತ್ತಾರೆ.

೬. ಕಾರಖಾನೆಯ ಕೆಲಸಗಾರರು ಪರಮಾವಧಿ ಬೋನಸ್ ಅಂದರೆ ೨೦ ಪ್ರತಿಶತ, ಪುಕ್ಕಟೆ ಔಷಧೋಪಚಾರ ಮತ್ತಿತರ ಸವಲತ್ತು ಪಡೆಯುತ್ತಲಿದ್ದಾರೆ.

'ಅದು'

ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರಖಾನೆ
ನಿಯಮಿತ, ಸಂಕೇಶ್ವರ, ಜಿಲ್ಲಾ ಬೆಳಗಾವಿ
(ಕರ್ನಾಟಕ ರಾಜ್ಯ)

| ಪಿ. ಡಿ. ಬಾಳಿಕುಂದ್ರಿ | ಎಸ್. ಎಮ್. ಪಾಟೀಲ | ಎಮ್. ಡಿ. ಪಾಟೀಲ |
|---|---|---|
| ಬಿ.ಎ. (ಆನರ್ಸ) | ಬಿ.ಎಸ್ ಸಿ. | ಬಿ.ಎ; ಎಲ್ ಎಲ್.ಬಿ. |
| ಕಾರ್ಯ ನಿರ್ದೇಶಕ | ವೈಸ್ ಚೇಅರಮನ್ | ಚೇಅರಮನ್ |

# ರಾಯಬಾಗ ತಾಲೂಕಾ ಪ್ರಾಥಮಿಕ ಶಿಕ್ಷಕರ ಪತ್ತು ಬೆಳೆಸುವ ಸಹಕಾರಿ ಸಂಘ ನಿಯಮಿತ ರಾಯಬಾಗ

ದಿನಾಂಕ ೩೦-೬-೧೯೮೪ಕ್ಕೆ ಇದ್ದಂತೆ

## ಸಂಘದ ಆರ್ಥಿಕ ಸ್ಥಿತಿಯ ಪತ್ರಿಕೋಟಿ

| | | | |
|---|---|---|---|
| ೧. | ಶೇಅರ ಬಂಡವಲು | ೪೬೪೦೭೦ | ರೂ. |
| ೨. | ಮುದ್ದತಿ ಠೇವು | ೧೯೭೮೬೧ | ,, |
| ೩. | ಚಿಗ್ಮಿ ಠೇವು | ೫೫೨೪೫ | ,, |
| ೪. | ರಿಝರ್ವ ಫಂಡ | ೮೯೯೦೩ | ,, |
| ೫. | ಇತರ ಫಂಡುಗಳು | ೪೬೪೫೨ | ,, |
| ೬. | ಬೇರೆ ಸಂಸ್ಥೆಗಳಲ್ಲಿ ಗುಂತಾಯಿಸಿದ ಹಣ | ೯೪೪೫೧ | ,, |
| ೭. | ಆಫೀಸ ಕಟ್ಟಡ | ೩೫೭೫೦ | ,, |
| ೮. | ಡೆಡ್‌ಸ್ಟಾಕ್ | ೪೯೦೧ | ,, |
| ೯. | ಸದಸ್ಯರಿಂದ ಬರತಕ್ಕ ಸಾಲ | ೭೪೪೨೮೫ | ,, |
| ೧೦. | ದುಡಿಯುವ ಭಾಂಡವಲ | ೯೬೩೦೮೫ | ,, |
| ೧೧. | ನಿವ್ವಳ ಲಾಭ ೧೯೮೩-೮೪ | ೭೩೭೦೨ | ,, |

## ಆಡಳಿತ ಸಮಿತಿ : ೧೯೮೩-೮೪

| | | | |
|---|---|---|---|
| ೧. | ಶ್ರೀ ಎಸ್. ಎಮ್. ಸತ್ತಿಗೇರಿ | | ಚೇಅರಮನ್ |
| ೨. | ,, ಜಿ. ಕೆ. ಅಳಬಾಳ | | ವ್ಹಾ-ಚೇಅರಮನ್ |
| ೩. | ,, ಬಿ. ಕೆ. ನಾಗರಾಳೆ | ವ್ಯಾ. ಕಮೀಟಿ | ಮೆಂಬರ |
| ೪ | ,, ಎಮ್. ಬಿ. ಹಾರೂಗೇರಿ | ,, | ,, |
| ೫ | ,, ಎಸ್. ಬಿ. ಹಿರೇಮಠ | ,, | ,, |
| ೬ | ,, ಎಸ್. ಬಿ. ಬೂದಿಹಾಳ | ,, | ,, |
| ೭ | ,, ಎಸ್. ಎಚ್. ಸಜನ | ,, | ,, |

## ನೌಕರ ವರ್ಗ

| | | |
|---|---|---|
| ೧. | ಶ್ರೀ. ಎಸ್. ದ್ರಾಕ್ಷೆ | ಕಾರ್ಯದರ್ಶಿ |
| ೨. | ,, ಎಸ್. ಎ. ಡಬ್ಬನವರ | ದ್ವಿ-ಗುಮಾಸ್ತ |

ಎ. ಎಸ್. ದ್ರಾಕ್ಷೆ
ಕಾರ್ಯದರ್ಶಿ

ಎಸ್. ಎಮ್. ಸತ್ತಿಗೇರಿ
ಚೇಅರಮನ್

: ಜಯ ಸಹಕಾರ :

# ದಿ ಮುಗಳಖೋಡ ಎಲ್ ಎಸ್ ಎಮ್ ಪಿ ಸೊಸಾಯಿಟಿ ಲಿ, ಮುಗಳಖೋಡ

ತಾ. ರಾಯಬಾಗ] [ಜಿಲ್ಲಾ : ಬೆಳಗಾವಿ

ಸಾಂಪತ್ತಿಕ ಸ್ಥಿತಿ : ೩೦–೬–೮೪

ಸಹಕಾರಿ ತತ್ವದ ಮೇಲೆ ಅತ್ಯುತ್ತಮ ಕಾರ್ಯ ಮಾಡುತ್ತ ಸದಸ್ಯರಿಗೆ ಮತ್ತು ಜನಸಾಮಾನ್ಯರಿಗೆ ವಿವಿಧ ರೀತಿಯಿಂದ ನೆರವಾಗಲು ನಮ್ಮ ಸಂಘ ಅನೇಕ ಯೋಜನೆಗಳನ್ನು ರೂಪಿಸಿ, ಕಾರ್ಯಗತ ಮಾಡುತ್ತಲಿದೆ.

ಅಲ್ಪಾವದಿ,ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ಕೊಡುವದು ;ವಿವಿಧ ಬಗೆಯ ಎಣ್ಣೆ ಪೂರೈಕೆ, ಅರಿವೆ ವ್ಯಾಪಾರ, ರಾಸಾಯನಿಕ ಗೊಬ್ಬರಗಳ ಸಕಾಲಿಕ ಪೂರೈಕೆ ಇವು ನಮ್ಮ ಸಂಘದ ಪ್ರಮುಖ ಚಟುವಟಿಕೆಗಳು.

| | | | |
|---|---|---|---|
| ಮೆಂಬರ ಸಂಖ್ಯೆ | ೧೯೮೫ | ಸಾಲ ವಸೂಲಿ | ೧೨೨೭೦೦೦ |
| ಶೇಅರ ಬಾಂಡವಲು | ೫೪೧೭೬೦ | ಬ್ಯಾಂಕ ಸಾಲ | ೧೨೪೧೯೦೦ |
| ರಿಜರ್ವ ಫಂಡ | ೨೨೬೩೧೧ | ಬ್ಯಾಂಕ ಸಾಲ ಪರತ | ೧೨೬೪೪೦೦ |
| ಮೆಂಬರ ಠೇವು | ೨೧೫೪ | ದುಡಿಯುವ ಬಾಂಡವಲು | ೨೫೯೨೩೯ |
| ಮೆಂಬರ ಸಾಲ ಹಂಚಿದ್ದು | ೧೫೫೪೫೩೦ | ನಕ್ಕಿಲಾಭ | ೪೦೫೦೦ |

ಆಡಿಟ್ ಕ್ಲಾಸ್ "ಅ"

## ದಿಗ್ದರ್ಶಕ ಮಂಡಳ

| | | | |
|---|---|---|---|
| ಶ್ರೀ ಸಂ. ಚ. ಕೊಪ್ಪದ | ಚೆಅರಮನ್ | ಶ್ರೀ ಲ. ತ. ಅರವಾಳಿ | ನಿರ್ದೇಶಕರು |
| ,, ಮಾ.ಶಿ. ಗೋಕಾಕ | ವ್ಹಾ. ಚೆಅರಮನ್ | ,, ಹ. ಮ. ಗೋಕಾಕ | ,, |
| ,, ಕ. ಶಿ. ಹುಲ್ಲೊಳ್ಳಿ, | ನಿರ್ದೇಶಕರು | ,, ಪಾ. ಬ. ಕೇತಗೌಡ | |
| ,, ರಾ. ಭ. ಶೇಗುಣಸಿ | ,, | ,, ಶು. ಹ. ಕದಮ್ | ,, |
| ,, ರಾ. ಯಾ. ಬಾಬಣ್ಣವರ | ,, | | |

| | | |
|---|---|---|
| **ಮಂ. ಸಂ. ಹಂದಿಗುಂದ** | **ಮಾ.ಶಿ. ಗೋಕಾಕ** | **ಸಂ. ಚ. ಕೊಪ್ಪದ** |
| ಸೆಕ್ರೆಟರಿ | ವ್ಹಾ. ಚೆಅರಮನ್ | ಚೆಅರಮನ್ |

# ಹುಕ್ಕೇರಿ ತಾಲೂಕ ಸಹಕಾರಿ ಗ್ರಾಮೀಣ ವಿದ್ಯುಚ್ಛಕ್ತಿ ಸಂಘ,ನಿ., ಹುಕ್ಕೇರಿ.

ತಾ : ಹುಕ್ಕೇರಿ ಜಿಲ್ಲಾ ಬೆಳಗಾವಿ

ಗ್ರಾಮೀಣ ವಿದ್ಯುತ್ತೀಕರಣ ಮಹಾಮಂಡಳ, ಹೊಸದಿಲ್ಲಿ, ಇವರ ಹಣಕಾಸಿನ ಸಹಾಯದಿಂದ ಸಹಕಾರಿ ತತ್ವಗಳ ಆಧಾರದ ಮೇಲೆ ನಡೆದ ಭಾರತದಲ್ಲಿಯೇ ಮಾದರಿಯುದಾದ ಕರ್ನಾಟಕದ ಏಕೈಕ ಸಂಸ್ಥೆ.

೩೦-೯-೧೯೮೪ಕ್ಕೆ ಸಾಧನೆ

| | | |
|---|---|---|
| ೧) | ಸದಸ್ಯರು | ೨೧೩೨೨ |
| ೨) | ಶೇಅರ ಭಂಡವಾಳ | ರೂ. ೩೫,೭೭, ೬೫೦-೦೦ |
| ೩) | ದುಡಿಯುವ ಬಂಡವಾಳ (೩೧-೩-೮೪ಕ್ಕೆ) | ರೂ. ೪ ಕೋಟಿ ೫೩ ಲಕ್ಷ |
| ೪) | ಗ್ರಾಮೀಣ ವಿದ್ಯುತ್ಕರಣ(೧೦೦% ಸಾಧನೆ) | ಮುಖ್ಯ ಹಳ್ಳಿಗಳು. ೧೦೭ |
| | | ಹ್ಯಾಮ್ಲೆಟಗಳು, ೧೫ |
| | | ಪುನರ್ ನಿವೇಶನ- ೧೪ |
| | | ಕೇಂದ್ರಗಳು,ಒಟ್ಟು : ೧೩೬ |
| ೫) | ಎಚ್.ಟಿ. ಲೈನು. | ೬೦೦ ಕಿ.ಮಿ. |
| ೬) | ಎಲ್.ಟಿ. ಲೈನು. | ೧೬೯೬ " " |
| | ವಿದ್ಯುತ್ ಜೋಡಣಿಗಳು : | |
| ೭) | ಒಕ್ಕಲುತನ ಪಂಪಸೆಟ್ಟುಗಳು | ೭೨೯೪ |
| ೮) | ಚಿಕ್ಕ ಉದ್ದಿಮೆಗಳು, | ೭೦೪ |
| ೯) | ಮನೆ ಹಾಗೂ ವ್ಯಾಪಾರೋದ್ದಿಮೆಗಳು | ೨೨೪೦೬ |
| ೧೦) | ಬೀದಿ ದೀಪಗಳು. | ೬೯೭೦ |
| ೧೧) | ಟ್ರಾನ್ಸಫಾರ್ಮರ ಕೇಂದ್ರಗಳು. | ೪೬೮ |

……

ಎಸ್.ಎಸ್. ಅನಿಗೋಳ
ಮ್ಯಾನೇಜರ.

ಆರ್.ಎಸ್ ನೇರ್ಲಿ
ಚೇಅರಮನ್.

# ಒಕ್ಕಲತನ ಹುಟ್ಟುವಳಿ ಮಾರುಕಟ್ಟೆ ಸಮಿತಿ ಗೋಕಾಕ

ತಂತಿ : ರೆಗಮಾರ್ಕ    ಸ್ಥಾಪನೆ ೧೯೪೮    ಫೋನ ನಂ. ೩೬

೧೭೦, ೭೭–೭೨ ಹತ್ತಿಯು ವ್ಯವಹಾರಕ್ಕೆ ರಾಜ್ಯದಲ್ಲಿಯೇ ಹೆಸರಾಂತ ಪೇಟೆ ಯೆನ್ನಿಸಿರುವ ಗೋಕಾಕ ಮಾರುಕಟ್ಟೆಗೆ ಹಟ್ಟುವಳಿ ತಂದ ರೈತ ಬಾಂಧವರಿಗೆ ಕೆಳಗೆ ಕಾಣಿಸಿದ ಭಗವಸೆಗಳನ್ನು ನಮ್ಮ ಸಮಿತಿಯು ನೀಡುತ್ತದೆ.

೧. ಸರಿಯಾದ ತೂಕ    ೨. ಉಚಿತ ವರ್ಗೀಕರಣ
೩. ಸ್ಪರ್ಧಾತ್ಮಕ ಬೆಲೆಗಳು    ೪. ತಕ್ಷಣ ಹಣ ಸಂದಾಯ
೫. ತಂಟೆಗಳ ಸುಲಭ ನಿವಾರಣೆ    ೬. ಪೇಟೆಯು ಸಮಾಚಾರ ದರ್ಶನ.

**ಎಲ್. ವ್ಹಿ. ಚಿಕ್ಕನ್ನಗೌಡರ**
ಕಾರ್ಯದರ್ಶಿ

**ಎಸ್. ಬಿ. ಸಂಗಣ್ಣವರ**
ಚೆಅರಮನ್ನರು

---

ಶುಭಾಶಯಗಳು :

# ದರೂರ ಗ್ರಾಮ ಸೇವಾ ಸಹಕಾರಿ ಸಂಘ ನಿಯಮಿತ, ದರೂರ

ತಾ : ಅಥಣಿ    ಜಿಲ್ಲಾ : ಬೆಳಗಾವಿ
ರ, ನಂ, ೮೮೨೮/೨    ರು. ತಾ ೨–೧೦–೧೯೪೪

**ಕಾರ್ಯಕಾರಿ ಮಂಡಳ**

ಶ್ರೀ ಧರೆಪ್ಪ ಶಿ. ಬಸಗೌಡರ    ಚೇಅರಮನ್
" ಗುರುನಿಂಗ ಮು. ಗುಮತಾಜ    ವ್ಯಾ. ಕ. ಮೆಂ.
" ಬಾಳಪ್ಪ ರೇ. ಗುಮಂತಾಜ    "
" ನಿಂಗಪ್ಪ ಜಿ. ಬಾಳಿಗೆರಿ    "
" ರಸೂಲ ಸು. ಅವಟಿ    "
" ಯಮನಪ್ಪ ರಾ. ದಳವಾಯಿ    "
" ರಾಮಪ್ಪ ಭೀ. ಬಸಗೌಡರ    "
" ಸುರೇಶ ಬಾ. ದಳವಾಯಿ    "
" ಜಕ್ಕಪ್ಪ ರಾ. ಜಂಗಿ    "

**ಶಂಕರ ರಾ. ದಳವಾಯಿ**
ಕಾರ್ಯದರ್ಶಿ

**ಭೀಮಪ್ಪ ರು. ಪಡಸಲಗಿ**
ಗೌರವ ಕಾರ್ಯದರ್ಶಿ

**ಧರೆಪ್ಪ ಶಿ. ಬಸಗೌಡರ**
ಚೇರಮನ್



**ಮಾನವಧರ್ಮ ಪ್ರತಿಷ್ಠಾನದ ಉದ್ಘಾಟನಾ ಸಮಾರಂಭಕ್ಕೆ ಶುಭಾಶಯಗಳು**

